# ಕೊಡಗು ಸಂಗಾತಿ

ಏಪ್ರಿಲ್, 1 ರಿಂದ 30, 2002 ಪಾಕ್ಷಿಕ ಪತ್ರಿಕೆ (ಸುಗ್ಗಿ 18-30, ಪಗ್ಗು 1-18)

ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 1-2 ಪುಟಗಳು : 24 ಬೆಲೆ ರೂ. : 12-00

CI III + IV → 6360 →
II → 5650 →
ADM → 9400 →
DM/AG 14505
24632



ಲೇಖನ : ಒಳಪುಟದಲ್ಲಿ.

**ಉತ್ತರದ ಫಿರೋಜ್‌ಪುರ ಗಡಿಯಲ್ಲಿ ಉಗ್ರಗಾಮಿಗಳ ಗುಂಡಿನ ಚಕಮುಖಿಯಲ್ಲಿ ವೀರ ಮರಣವನ್ನಪ್ಪಿದ ಕೊಡಗಿನ ಕಲ್ಲುಮಂದೀರ ರಾಮಪ್ಪ ಸುರೇಶ.**

*"ಕೊಡಗು ಸಂಗಾತಿ" ತನ್ನ*      *6 ನೇ ವರ್ಷಕ್ಕೆ*

*ಪಾದಾರ್ಪಣೆಗೈಯ್ಯಲು ಸಹಕರಿಸಿದ ಚಂದದಾರರಿಗೂ ಶುಭ ಹಾರೈಕೆಗಳು*

## ಓದುಗರು ತಪ್ಪದೆ ಗಮನಿಸಿ !

"ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯ ದೂರವಾಣಿ ಸಂಖ್ಯೆ 516771 ಅನ್ನು ಆರ್ಥಿಕತೆಯ ಅನಿವಾರ್ಯತೆಯಿಂದಾಗಿ ರದ್ದು ಪಡಿಸಲಾಗಿದೆ. ಇನ್ನು ಮುಂದಕ್ಕೆ 0821 - 404290 ಅನ್ನು ಮಾತ್ರ ಸಂಪರ್ಕಿಸಿ ಸಹಕರಿಸುವಂತೆ ಕೋರಿಕೆ.

**ಸಂಗಾತಿ ಕಛೇರಿ : ☎ 0821 - 404290**

"ಕೊಡಗು ಸಂಗಾತಿ"
ಪಾಕ್ಷಿಕ ಪತ್ರಿಕೆ
ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ,
ಹಿನ್‌ಕಲ್ ಅಂಚೆ,
ಮೈಸೂರು - 570 017

**ಮನೆ ವಿಳಾಸ :**

"ಕೊಡಗು ಸಂಗಾತಿ"
# 12058, ಸಂಗಾತಿ ನಿಲಯ,
ವಿಜಯನಗರ,IV ಸ್ಟೇಜ್, IIನೇ ಘಟಕ ಹಿನ್‌ಕಲ್ ಅಂಚೆ,
ಮೈಸೂರು - 570 017
☎ 0821 - 404290

ಕೊಡಗು ಸಂಗಾತಿ, ಕಛೇರಿಯಲ್ಲಿ ಕೆಲಸ ನಿಭಾಯಿಸಲು ಒಬ್ಬರ ಅವಶ್ಯಕತೆ ಇದೆ ಸಂಪರ್ಕಿಸಿ - 404290

ಕಛೇರಿ : ಸಮಯ : ಬೆಳಿಗ್ಗೆ 10-00 ಗಂಟೆಯಿಂದ ಸಂಜೆ 5-00 ಗಂಟೆಯ ತನಕ
ಭಾನುವಾರ ರಜಾ ದಿನ. ಎಲ್ಲಾ ಪತ್ರ ವ್ಯವಹಾರಗಳು ಈ ಮೇಲಿನ ವಿಳಾಸದಲ್ಲಿ ಮಾಡುವುದು.

ಸಂಗಾತಿ ಚಂದದಾರರು ತಪ್ಪದೆ ಪತ್ರಿಕೆಯನ್ನು ನವೀಕರಿಸಿ ಪತ್ರಿಕೆಯ ಅಭಿವೃದ್ಧಿಗೆ ಸಹಕರಿಸುವಂತೆ ವಿನಮ್ರ ಕೋರಿಕೆ.
-ಸಂಪಾದಕ

ಪತ್ರಿಕೆಯ ಚಂದದಾರರ ನವೀಕರಣ ದಿನಾಂಕವನ್ನು ಜ್ಞಾಪನ ಪತ್ರ ದಲ್ಲಿ ನಮೂದಿಸಿ ಪತ್ರಿಕೆ ಒಳಗಡೆ ಇಡಲಾಗಿದೆ. ದಯವಿಟ್ಟು, ಗಮನಿಸಿ. ಬಾಕಿದಾರರು ಕೂಡಲೆ ಕಳುಹಿಸಿ ಸಹಕರಿಸುವುದು. ಪತ್ರಿಕೆ ನೀವುಗಳಿಗೆ ಬೇಕೆಬೇಡ್ವೆ ಅನ್ನೊದನ್ನ ಸ್ಪಷ್ಟವಾಗಿ ತಿಳ್ಸಿ. ಪತ್ರಿಕೆಯನ್ನು ನಿಲ್ಲಿಸಲು ಅನುಕೂಲವಾಗುವುದು.
- ಸಂಪಾದಕ ಮತ್ತು ಬಳಗ

## ಗಮನಿಸಿ.

ಗೌಡ ಬರಹಗಾರ ಕೂಟವೊಂದು ಶೀಘ್ರದಲ್ಲೇ ಅಸ್ತಿತ್ವಕ್ಕೆ ಬರಲಿದೆ. ಆಸಕ್ತರು ದಯವಿಟ್ಟು, "ಕೊಡಗು ಸಂಗಾತಿ"ಗೆ, ತಮ್ಮ ವಿಳಾಸವನ್ನು 30- 4-2002ರ ಒಳಗೆ ಪತ್ರ ಮುಖೇನ ತಿಳಿಸುವುದು.
ಸಂಪರ್ಕಿಸಿ ☎ **0821 - 404290**

"ಕೊಡಗು ಸಂಗಾತಿ" ಪತ್ರಿಕೆಯನ್ನು ಒಲೆ ಒಂದರಂತೆ ಕೊಂಡು ಓದಿರಿ

"ಕೊಡಗು ಸಂಗಾತಿ" ತನ್ನ      6 ನೇ ವರ್ಷಕ್ಕೆ
ಪಾದಾರ್ಪಣೆಗೈಯ್ಯಲು ಸಹಕರಿಸಿದ ಓದುಗರೆಲ್ಲರಿಗೂ ಯುಗಾದಿಯ ಶುಭ ಹಾರೈಕೆಗಳು



# 2002, ಏಪ್ರಿಲ್ 1 ರಿಂದ 30 ರ ತನಕ

**ಒಳನೋಟ**




| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35, "ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು- 12. **ಫೋನ್ : 0821/404290** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ/ ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ, ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್: 08272/29620 |
|  ವಿರಾಜಪೇಟೆ | ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್: 08274/56591 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ- 571 234 ಫೋನ್: 08276/73370 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು-19, ಫೋನ್: 080/6500946 |

ಚಂದಾ ವಿವರ: ಜೀವಾವಧಿ ಸದಸ್ಯತನ- 2000 ರೂ., ಬಿಡಿ ಪ್ರತಿ- 12ರೂ.

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ :

## ಕೊಡಗಿನ ಗ್ರಾಮೀಣ ಪ್ರದೇಶಗಳಲ್ಲಿ ಸೌದೆಯ ಅಭಾವ!

ಕೊಡಗು ದಟ್ಟವಾದ ಕಾಡುಗಳಿಂದ ಕೂಡಿದ ಪ್ರದೇಶವೆಂದು ಹಿಂದೆ ಪ್ರತೀತಿ ಇತ್ತು. ಆದರೆ ಈಗ ಆ ಕಾಡುಗಳನ್ನೆಲ್ಲಾ ಕಡಿದು ಕಾಫಿ ತೋಟ, ಶುಂಠಿ ಬೆಳೆಸುವುದಕ್ಕಾಗಿ ಬಟ್ಟಂಬೈಲು ಮಾಡಿ ಬೋಳಾಗಿ ಕಾಣುವ ದೃಶ್ಯ ಸರ್ವೇಸಾಮಾನ್ಯವಾಗಿ ಕರುಳು ಹಿಂಡುವಂತಾಗಿದೆ. ಇದರಿಂದಾಗಿ ಹಿಂದೆ ಯತೇಚ್ಛವಾಗಿ ದೊರಕುತ್ತಿದ್ದ ಸೌದೆಯು ಮಾಯವಾಗಿ ಸಾಮಾನ್ಯ ಜನ ಸೌದೆಗಾಗಿ ಪರದಾಡುವ ಸ್ಥಿತಿ ಬಂದೊದಗಿದೆ. ಇದನ್ನು ನೀಗಿಸಲು ಪ್ರತಿ ಹಿಡುವಳಿದಾರನು ತನ್ನ ಗದ್ದೆಯ ಬಾಣೆ (ಬರೆಯ) ಸುತ್ತಲೂ ಸೌದೆಗಳಿಗಾಗಿ ಮರಗಳನ್ನು ಬೆಳೆಸುವ ಏರ್ಪಾಡು ಮಾಡಬೇಕು.

ಈ ರೀತಿಯ ಏರ್ಪಾಡು ಮಾಡದೇ ಇದ್ದು ಮರಗಳನ್ನು ಕಡಿದು ಸೌದೆಗಾಗಿ ಉಪಯೋಗಿಸಿದರೆ ಇನ್ನೂ ಹತ್ತು ಇಪ್ಪತ್ತು ವರ್ಷಗಳಲ್ಲಿ ಜನರು ಸೌದೆಗಾಗಿ ಒದ್ದಾಡುವ ಸ್ಥಿತಿ ಖಂಡಿತವಾಗಿ ಬರುತ್ತದೆ. ಅಡಿಗೆ , ಸ್ನಾನಕ್ಕೆ, ಅನಿಲ ಅಥವಾ ವಿದ್ಯುಚ್ಛಕ್ತಿ, ಬಳಸುವುದು ಬಡವ ಮತ್ತು ಮಧ್ಯಮ ವರ್ಗದವರಿಗೆ ಎಟುಕದ ಪರಿಸ್ಥಿತಿಯಾಗಿ ಪರಿಣಮಿಸಿದೆ. ಈಗಾಗಲೇ ಮನೆಯ ಬೆಳಕಿಗಾಗಿ ಉಪಯೋಗಿಸುವ ವಿದ್ಯುಚ್ಛಕ್ತಿಗೆ ಅದರ ಕ್ರಯವನ್ನು ಪಾವತಿಮಾಡಲಿಕ್ಕೆ ಸಾಧ್ಯವಿಲ್ಲದೆ ತವಕ ಪಡುತ್ತಿದ್ದಾರೆ. ಅನಿಲದ ಬೆಲೆ ದಿನ ದಿನಕ್ಕೆ ಹೆಚ್ಚುತ್ತಾ ಹೋಗುವುದಲ್ಲದೆ ಅದರ ಸಾಗಾಣಿಕೆಯು ಕಷ್ಟಕರವಾಗಿದೆ.

ಸೌದೆಯ ಜೊತೆಯಲ್ಲಿ ಸೂರ್ಯಕಿರಣವನ್ನು ಹಿಡಿದಿಟ್ಟು ಉಪಯೋಗಿಸುವ ಯೋಜನೆಯನ್ನಾದರು ಜನರು ಬಳಸುವ ಏರ್ಪಾಡನ್ನು ಗ್ರಾಮ ಪಂಚಾಯಿತಿ, ,ತಾಲ್ಲೂಕು ಪಂಚಾಯಿತಿ ಹಾಗೂ ಸಹಕಾರ ಸಂಘಗಳು ಏರ್ಪಡಿಸಿದರೆ ಕಟ್ಟಿಗೆ ಉಪಯೋಗದಲ್ಲಿ ಖಂಡಿತ ಸುಧಾರಣೆ ತರಬಹುದೆಂದು ಸಂಗಾತಿಯ ಸಲಹೆಯಾಗಿದೆ. ನೈಸರ್ಗಿಕವಾಗಿ ಸೂರ್ಯ ಕಿರಣ ಸಿಗುವುದರಿಂದ ಇಂಥಹ ಯೋಜನೆ ಇಂದು ಅನಿವಾರ್ಯವಾಗಿದೆ ಅಲ್ಲದೆ ಲಾಭದಾಯಕವೂ ಕೂಡ.

### " ಕಪ್ಪು ಕಸ್ತೂರಿ ಗಡ"

"ಕಪ್ಪು" ಕಸ್ತೂರೀತ ಹೇಳ್ದ ಅಪ್ಪನ ಮಾತಿಗೆ
ಬೆಲೆ ಕೊಟ್ಟ ಮಂಜ್ಣ ಕಡೆಗೂ ಮದುವೆ ಆತ್.........
ಬಂದನ ಮ್ಯಾಲೆಂದ ಎತ್ತಿ ನೆಲಕ್ಕೆ ಕುಕ್ಕಿದಂಗೆ
ಮುಖ ಲಕ್ಷಣ ಇರುವ......
ಎಲ್ಲೋ ನೋಡ್ರೆ ಎತ್ತಲೋ ನೋಡುವಂಗೆ
ಕಾಂಬ ಕೋಸ್ ಕಣ್ಣ್ ನ....
ತೊಲ್ದ ಮಸಿ ಬಣ್ಣದ ಏಕ್ ತೇಳ್ ಕನ ಪೂಕ್ ತಾ ಹೇಳುವ,
ಎದ್ದರೆ ಕುದ್ರಿಕೆ ಬತ್ತ್, ಕುದ್ದರೆ ಎದ್ರಿಕೆಬತ್ತ್
ದಂಗಿರುವ ಬತ್ತದ ಕಡ್ಕೆನ.

- ಕೆ.ಕೆ.ಜಯ ಪ್ರಕಾಶ್ ಸೋಮವಾರ ಪೇಟೆ

## 1837 ರ ಸ್ವಾತಂತ್ರ್ಯ ಸಂಗ್ರಾಮದ ನೆನಪಿಗಾಗಿ. ಅಮರ ಸುಳ್ಯದ ಸ್ವಾತಂತ್ರ್ಯ ದಂಗೆಯಲ್ಲಿ ಗೌಡರ ಪಾತ್ರ:-

ಅಮರ ಸುಳ್ಯದ ಸ್ವಾತಂತ್ರ್ಯ ದಂಗೆ ಎಂಬ ನಮ್ಮ ಪಶ್ಚಿಮ ಘಟ್ಟದ ಇತಿಹಾಸದಲ್ಲಿ ಇಲ್ಲಿನ ಪ್ರಬಲ ಕೋಮಿನವರಾದ ಗೌಡ ಜನಾಂಗದ ಪಾತ್ರ ಪ್ರಮುಖವಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೌಡ ಜನಾಂಗ ಪ್ರಬಲವಾಗಿರುವ ತಾಲೂಕು ಸುಳ್ಯ ಮತ್ತು ಮಡಿಕೇರಿ ಆಗಿರುತ್ತದೆ. ಈ ಮಣ್ಣಿನಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಪ್ರಾಣ ತೆತ್ತಿರುವವರನ್ನು ನೆನೆಯುವುದು ಬಹಳ ಅಗತ್ಯ. ಕ್ರಿ. ಶ. 1837 ರಲ್ಲಿ ಅಂದರೆ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕಿಂತಲೂ ಇಪ್ಪತ್ತು ವರ್ಷಗಳ ಮೊದಲೇ ನಿರ್ದಿಷ್ಟವಾಗಿ ದೇಶದ ಸಂಪೂರ್ಣ ಸ್ಥಿತಿಗತಿಗಳ ಅರಿವಿದ್ದು ಅಥವಾ ಇಲ್ಲದೆಯೊ ಸ್ವಾತಂತ್ರ್ಯದಾಹವನ್ನು ಪ್ರಥಮವಾಗಿ ವ್ಯವಸ್ಥಿತ ಜನಕ್ರಾಂತಿಯ ಮೂಲಕ ಬ್ರಿಟಿಷರಿಗೆ ತೋರಿಸಿ ಕೊಟ್ಟವರು ನಮ್ಮ ಪೂರ್ವಿಕರು ಎನ್ನುವುದರಲ್ಲಿ ಯಾವ ಸಂಶಯ ಇಲ್ಲ.

ಕೊಡಗು ಪರಾಧೀನವಾಗುವ ಕೆಲವೇ ಸಮಯದ ಮೊದಲು, ಪರಂಪರೆಯನ್ನು ತ್ಯಜಿಸಿ ಅಪರಂಪರನೆನಿಸಿದ ಕೊಡಗಿನ ಕರಾಳ ದಿನಗಳ ಅರಿವಿತ್ತೂ ಎಂದೆನಿಸುವಂತೆ ಜನ ಜಾಗೃತಿಯನ್ನು ಹುಟ್ಟು ಹಾಕುತ್ತಾ ಸುಳ್ಯ ಸೀಮೆಗೂ ಬಂದಿದ್ದು ಸುಳ್ಯದ ಪ್ರಮುಖ ಗೌಡ ಮನೆತನವಾದ ಕೂಜಿಗೋಡು ಕಟ್ಟೆಮನೆ ಅಪ್ಪಯ್ಯ ಗೌಡ, ಕೆದಂಬಾಡಿ ರಾಮಗೌಡ ಮುಂತಾದವರಲ್ಲಿ ಅವಕಾಶವಾದಿಗಳ ಬಗ್ಗೆ ಜಾಗ್ರತೆಯಲ್ಲಿರುವಂತೆ ಮೊದಲೇ ಸೂಚಿಸಿರುತ್ತಾನೆ. ಮುಂದೆ ಕೊಡಗು ಮೋಸಕ್ಕೆ ಒಳಗಾಗಿ ಕೊನೆಯ ಅರಸ ಚಿಕ್ಕವೀರರಾಜ ಪದಚ್ಯುತವಾಗುತ್ತಾನೆ. ಕೊಡಗಿನ ಅರಸರ ಪದಚ್ಯುತಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದ ದಿವಾನ ಬೋಪು, ದಿವಾನ ಲಕ್ಷ್ಮೀನಾರಾಯಣ ಲೀಹಾರ್ಡಿಯ ಆಪ್ತರೆನಿಸುತ್ತಾರೆ. ಅದೇ ಸಮಯದಲ್ಲಿ ಮತ್ತೊಮ್ಮೆ ಅಮರ ಸುಳ್ಯಕ್ಕೆ ಭೇಟಿ ನೀಡಿದ ಅಪರಂಪರ ಕೂಜಿಗೋಡು ಅಪ್ಪಯ್ಯ ಗೌಡರ ಸಹಾಯದಿಂದ ಬ್ರಿಟಿಷರ ವಿರುದ್ಧ ದಂಗೆಯೇಳುವ ಪ್ರಯತ್ನದಲ್ಲಿ ಇದ್ದಾಗಲೇ ಸೆರೆಸಿಕ್ಕಿ ಕಾರಾಗ್ರಹ ಸೇರುತ್ತಾನೆ.

ಇವೆಲ್ಲ ಘಟನೆಗಳ ನಡುವೆ ದಿವಾನ ಲಕ್ಷ್ಮಿನಾರಾಯಣನ ತಮ್ಮನಾದ ಶ್ಯಾನುಭೋಗ ಅಟ್ಲೂರು ರಾಮಪ್ಪಯ್ಯ ಎಂಬುವನು ತನ್ನ ದರ್ಪ ದಬ್ಬಾಳಿಕೆಗಳ ಮೂಲಕ ಜನ ಸಾಮಾನ್ಯರಲ್ಲಿ ಭಯದ ಬೀಜವನ್ನು ಬಿತ್ತುತ್ತಾ, ಸಾಮಾನ್ಯ ಜನಗಳ ಆಸ್ತಿ ಚಿರಾಸ್ತಿಗಳನ್ನು ತನ್ನದರಲ್ಲಿ ಸೇರಿಸುತ್ತಾ ಬೆಳೆಯುತ್ತಿರುತ್ತಾನೆ. ಅವನ ಮಹತ್ವಕಾಂಕ್ಷೆ ಎಲ್ಲಿಯ ತನಕ ಮುಟ್ಟುತ್ತದೆಯೆಂದರೆ ತಾನು ಅಟ್ಲೂರು ದೊರೆಯೆಂದೇ ಕರೆಸಿಕೊಳ್ಳುತ್ತಾನೆ. ಈ ನಡುವೆ ಕಳಗಿ ಅಣ್ಣು ಎಂಬವನ ಆಸ್ತಿಯನ್ನು ಬಲಪ್ರಯೋಗದಿಂದ ರಾಮಪ್ಪನು ವಶಪಡಿಸಿಕೊಂಡಾಗ ಗೌಡ ಜನಾಂಗದ ಅಸಹನೆ ಹೆಚ್ಚುತ್ತದೆ.

12ನೇ ಪುಟಕ್ಕೆ

ಕುಲವನ್ನು ನಾಲಿಗೆ ಹೇಳುವುದು - ಮಾತನಾಡುವಾಗ ಮೈಮೇಲೆ ಪ್ರಜ್ಞೆ ಇರಲಿ.

# ಗಡಿ ಉಗ್ರಗಾಮಿಗಳ ಗುಂಡಿಗೆ ಬಲಿಯಾದ ಕೊಡಗಿನ ಯೋಧ ಚೆನ್ನಂಗಿ ಗ್ರಾಮದ ಕಲ್ಲು ಮಂದೀರ ರಾಮಪ್ಪ ಸುರೇಶ್ ಹುತಾತ್ಮ.

ಭಾರತೀಯ ಗಡಿಭದ್ರತಾ ಪಡೆಯಲ್ಲಿ ಹವಲ್ದಾರರಾಗಿ ಸೇವೆ ಸಲ್ಲಿಸುತ್ತಿದ್ದ, ಮಾಲ್ದಾರೆ ಚೆನ್ನಂಗಿ ಗ್ರಾಮದ ಕಲ್ಲುಮಂದಿರ ರಾಮಪ್ಪ ಸುರೇಶ್‌ನವರು ಉತ್ತರದ ಗಡಿ ಭಾಗದಲ್ಲಿ ಫೀರೋಜ್‌ಪುರ ಸಮೀಪ ಮಾ. 16 ರಂದು ಉಗ್ರಗಾಮಿಗಳ ನೆಲೆಯೊಂದರ ಮೇಲೆ ಧಾಳಿ ನಡೆಸಿದ ಸಂದರ್ಭ, ಆಗ ನಡೆದ ಘೋರ ಗುಂಡಿನ ಚಕಮಕಿಯಲ್ಲಿ ದೇಶ ಸೇವೆಯಲ್ಲಿ ತೊಡಗಿದ್ದ ತನ್ನ ಕರ್ತವ್ಯ ಪಾಲನೆಯಲ್ಲಿದ್ದಾಗಲೇ ವೀರ ಮರಣವನ್ನು ಅಪ್ಪಿ ಹೆತ್ತವರಿಗೂ ನಾಡಿಗೂ ದೇಶಕ್ಕೂ ಕೀರ್ತಿಯನ್ನು ತಂದಿರುವ ಹೆಮ್ಮೆ ಯೋಧ ದಿವಂಗತ ಸುರೇಶನದಾಗಿರುತ್ತದೆ.

ಕೊಡಗಿನ ಮಾಲ್ದಾರೆ ಸಮೀಪ ಚೆನ್ನಂಗಿ ಗ್ರಾಮದ ಕಲ್ಲು ಮಂದೀರ ರಾಮಪ್ಪನವರ ಹಿರಿಯ ಪುತ್ರರಾಗಿದ್ದ ಸುರೇಶ್‌ನವರಿಗೆ 39 ವರ್ಷ. ಕಳೆದ 18 ವರ್ಷಗಳಿಂದ ಭಾರತೀಯ ಗಡಿಭದ್ರತಾ ಪಡೆಯಲ್ಲಿ, ಕರ್ತವ್ಯ ನಿರ್ವಹಿಸುತ್ತಿದ್ದ ಸುರೇಶ್ ಹವಲ್ದಾರ್ ಆಗಿ ಸೇವೆ ಸಲ್ಲಿಸುತ್ತಿದ್ದರು. ಇನ್ನು 2 ವರ್ಷ ಸೇವೆ ಸಲ್ಲಿಸಿ ಪೂರ್ತಿ 20 ವರ್ಷಮಾಡಿ ಪೂರ್ಣ ಪ್ರಮಾಣದ ಸೌಲಭ್ಯ ಪಡೆದು ತನ್ನ ಊರಿನಲ್ಲಿದ್ದ ಚಿಕ್ಕ ಆಸ್ತಿಯಲ್ಲಿ ಚೊಕ್ಕದಾದ ಮನೆಯಲ್ಲಿ ನೆಚ್ಚಿನ ಮಡದಿ ರತಿಕುಮಾರಿ ಮತ್ತು ಮಗು ತೇಜಸ್ವಿನಿಯೊಡನೆ ಸಿದ್ದಾಪುರದಲ್ಲಿ ನೆಲೆಸಲು ಯೋಚಿಸಿದ್ದ ಇವರ ಆಸೆ ಆಕಾಂಕ್ಷೆಯು ಚಿಗುರಿನಲ್ಲಿಯೇ ಕಮರಿಹೋಗಿದ್ದು ಇವರ ಪಾಲಿಗೆ ದುರದೃಷ್ಟಕರ ಸಂಗತಿ.

ಸಾಮಾನ್ಯ ಬಡ ಕೃಷಿಕ ಕುಟುಂಬದಲ್ಲಿ ಹುಟ್ಟಿದ ಸುರೇಶ್ ತನ್ನ ದ್ವಿತೀಯ ಪದವಿ ಪೂರ್ವ ಕಾಲೇಜು ಓದಿ ದೇಶ ಸೇವೆಗಾಗಿ ಭಾರತೀಯ ಗಡಿಭದ್ರತಾ ಪಡೆಯನ್ನು ಸೇರಿಕೊಂಡರು.6 ಜನ ಮಕ್ಕಳ ಪೈಕಿ ಹಿರಿಯರಾಗಿದ್ದರು ಸಹ, 3 ತಿಂಗಳ ಹಿಂದೆ ತಂದೆ ರಾಮಪ್ಪನವರು ವೈಕುಂಠವಾಸಿಯಾದ ಸಂದರ್ಭ ಕರ್ತವ್ಯ ನಿಮಿತ್ತದಿಂದ ಬರಲಾಗದೆ, ನಂತರ ಮೃತ ತಂದೆಯ ತಿಥಿ ಕರ್ಮಾಂತರಕ್ಕೆ ಆಗಮಿಸಿ, ಎಲ್ಲಾ ವಿಧಿ ವಿಧಾನ ಕೈಂಕರ್ಯಗಳನ್ನು ಪೂರೈಸಿ ಮರಳಿ ಸೇವೆಗೆ ಮರಳಿದ್ದರು. ಹುತಾತ್ಮರಾಗುವ ನಾಲ್ಕೈದು ದಿನಗಳ ಹಿಂದೆ ದೂರವಾಣಿಯಲ್ಲಿ ತನ್ನ ಪತ್ನಿ, ಮಗಳು, ತಾಯಿ ಮನೆಯವರೆಲ್ಲರ ಯೋಗಕ್ಷೇಮ ವಿಚಾರಿಸಿದಲ್ಲದೆ, ವಾರಕೊಮ್ಮೆಯಾದರು ಸಂಸಾರಕ್ಕೆ ದೂರವಾಣಿ ಮಾಡಿ ಮಾತನಾಡುವ ಪರಿಪಾಠವಿದ್ದು ಇದೇ ಏಪ್ರಿಲ್ ಮೊದಲ ವಾರದಲ್ಲಿ ರಜೆಯಲ್ಲಿ ಬರುವುದಾಗಿ ತಿಳಿಸಿದ್ದರು.

ಸುರೇಶ್‌ರವರು ಪಾಲೂರು ಗ್ರಾಮದ ಅಚ್ಚುಡ ಪೂವಯ್ಯನವರ ಸಹೋದರ ದಿ|| ಬೆಳ್ಯಪ್ಪನವರ ಪುತ್ರಿ ದೇವಮ್ಮಾಜಿ (ರತಿ) ಯನ್ನು ವಿವಾಹವಾಗಿದ್ದು 6 ವರ್ಷದ ತೇಜಸ್ವೀನಿಯೆಂಬ ಪುತ್ರಿಯನ್ನು ಹೊಂದಿದ್ದಾರೆ. ದೇವಮ್ಮಾಜಿ ಅವರು ಮಾಲ್ದಾರೆ ಸಮೀಪ ಕಲ್ಲಳ್ಳದ ಅಂಗನವಾಡಿಯಲ್ಲಿ ಶಿಕ್ಷಕಿಯಾಗಿದ್ದಾರೆ. ಪುತ್ರಿ 2 ನೇ ತರಗತಿಯಲ್ಲಿ ಗುಡ್ಲೂರಿನಲ್ಲಿ ಓದುತ್ತಿದ್ದಾಳೆ.

ದಿನಾಂಕ 16-3-2002 ರಂದು ಗುಂಡಿನ ಘೋರ ಚಕಮುಖಿಯಲ್ಲಿ ಹುತಾತ್ಮರಾದ ಸುರೇಶ್‌ನವರ ಪಾರ್ಥಿವ ಶರೀರವು 18-3-2002 ರ ಸೋಮವಾರ ಮಧ್ಯಾಹ್ನ 12-15 ಕ್ಕೆ ವಿಮಾನದಲ್ಲಿ ಬೆಂಗಳೂರಿಗೆ ತರಲಾಯಿತು. ಗಡಿಭದ್ರತಾ ಪಡೆಯ S.T.E 4 ಅಧಿಕಾರಿ ಆರ್. ಮೇಲುಕುಟ್ಟೆಯವರು ಪುಷ್ಪಗುಚ್ಛವಿರಿಸಿ ಯೋಧನಿಗೆ ನಮನ ಸಲ್ಲಿಸಿ ಪಾರ್ಥಿವ ಶರೀರವನ್ನು ಬರಮಾಡಿಕೊಂಡರು. ಅಸಿಸ್ಟೆಂಟ್ ಕಮಾಂಡರ್ ಆಶಾಚಂದ್ ಅವರು ಈ ಸಂದರ್ಭ ಹಾಜರಿದ್ದರು. ಪಂಜಾಬ್ ಫರೀದ್‌ಕೋಟ್ ಸೆಕ್ಟರ್‌ನ 42 ನೇ ಬೆಟಾಲಿಯನ್‌ನ ಪೂರನ್‌ಸಿಂಗ್ ಅವರು ಪಾರ್ಥಿವ ಶರೀರ ತರಲು ಸಹಕರಿಸಿದ್ದರು.

ಆ ಬಳಿಕ ಬಿ. ಎಸ್. ಎಫ್. ನ DLIV 5636 ರ ವಾಹನದಲ್ಲಿ ಸುರೇಶ್ ಅವರ ಪಾರ್ಥಿವ ಶರೀರವನ್ನು ಸ್ವಗ್ರಾಮ ಚೆನ್ನಂಗಿಗೆ ತರಲಾಯಿತು. ಸಂಜೆ 6-30 ರ ಸುಮಾರಿಗೆ ಕೊಡಗಿನ ಗಡಿ ಮಾಲ್ದಾರೆ ಗೇಟ್ ಬಳಿ ಕೊಡಗು ಜಿಲ್ಲಾಡಳಿತ ಪರವಾಗಿ ಉಪ ವಿಭಾಗಾಧಿಕಾರಿ ವಿ. ಜಿ. ಟೇಕ್‌ರಾಜ್, ಪೊಲೀಸರ ಪರವಾಗಿ ಸರ್ಕಲ್ ಮಾದಯ್ಯ, ತಹಸಿಲ್ದಾರ್ ಚಿಕ್ಕ ಹೊನ್ನಯ್ಯ, ಚೇರಂಡ ನಂದಾ ಸುಬ್ಬಯ್ಯ; ಗ್ರಾ. ಪಂ. ಅಧ್ಯಕ್ಷೆ ಚಂದ್ರಿಕಾ, ತಾ. ಪಂ. ಸದಸ್ಯ ಸಿ. ಎ. ಹಂಸ, ಗ್ರಾಮದ ಮುಖಂಡ ಎಂ. ಮಿಟ್ಟು ಚಂಗಪ್ಪ ಅವರುಗಳು ಬರಮಾಡಿಕೊಂಡರು.

ಬಳಿಕ ಪಾರ್ಥಿವ ಶರೀರವನ್ನು ಅಲ್ಲಿಂದ 2 ಕಿ. ಮೀ. ದೂರದ ಚೆನ್ನಂಗಿ ಗ್ರಾಮದಲ್ಲಿರುವ ಸ್ವಗೃಹಕ್ಕೆ ತರಲಾಯಿತು. ಈ ಸಂದರ್ಭ ಸಾವಿರಾರು ಹಿತೈಷಿಗಳು, ಬಂಧುಗಳು, ಹಾಜರಿದ್ದು ಮೃತರ ಅಂತಿಮ ದರ್ಶನಕ್ಕೆ ಕಾದಿದ್ದರು. ಪಾರ್ಥಿವ ಶರೀರ ಮನೆ ತಲುಪುತ್ತಿದ್ದಂತೆಯೇ ಸುರೇಶನವರ ತಾಯಿ, ಪತ್ನಿ ದೇವಮ್ಮಾಜಿ, ಮಗಳು ತೇಜಸ್ವಿನಿ, ಸಹೋದರ, ಸಹೋದರಿ, ಅತ್ತಿಗೆ ನಾದಿನಿಯಂದಿರ ದುಃಖದ ಕಟ್ಟೆಯೊಡೆದು ಇಡೀ ಮನೆ, ಊರು ದುಃಖ ಸಾಗರದಲ್ಲಿ ಮುಳುಗಿತು.

ಸುಮಾರು 10 ನಿಮಿಷಗಳ ಕಾಲ ಮನೆಯಂಗಳದಲ್ಲಿರಿಸಿದ ಪಾರ್ಥಿವ ಶರೀರವನ್ನು ಅನಂತರ ಮನೆಯ ಕೈಯಾಲೆಯಲ್ಲಿರಿಸಿ ವಿಧಿ ವಿಧಾನಗಳನ್ನು ಪೂರೈಸಿದ ಬಳಿಕ ಮತ್ತೆ ಸಾರ್ವಜನಿಕರ ದರ್ಶನಕ್ಕೆ ಇಡಲಾಯಿತು. ರಾತ್ರಿ 8-30 ಕ್ಕೆ ಮನೆ ಸಮೀಪದಲ್ಲಿ ನಿರ್ಮಿಸಿದ ಚಿತಗಾರಕ್ಕೆ ಪಾರ್ಥಿವ ಶರೀರವನ್ನು ಒಯ್ದು ಬಳಿಕ ಸರ್ಕಾರಿ ಹಾಗೂ ಮಿಲಿಟರಿ ಗೌರವಗಳೊಂದಿಗೆ ಅಂತಿಮ ನಮನ ಸಲ್ಲಿಸಲಾಯಿತು.

ಜಿಲ್ಲೆಯ ಶಸಸ್ತ ಪಡೆಯ ಇನ್‌ಸ್ಪೆಕ್ಟರ್ ಮೊಣ್ಣಪ್ಪ ಅವರ ನೇತೃತ್ವದ ತಂಡ ಗೌರವ ಶ್ರೀ ರಕ್ಷೆ ನೀಡಿದ ಬಳಿಕ ಸುರೇಶ

5 ನೇ ಪುಟಕ್ಕೆ

ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು

# ಪ್ರಚಾರ ಬಯಸದ ಸೇವಾನಿರತ, ಸೌಮ್ಯ ಸ್ವಭಾವದ ರಾಜಕಾರಣಿ ಶ್ರೀ ಯಂಕನ ಉತಯ್ಯನವರು.



'ಉದ್ಯೋಗಂ ಪುರುಷ ಲಕ್ಷಣಂ' ಎಂಬ ಮಾತೊಂದಿದೆ. ಆದರೆ ಈಗೀಗ ಅದು ಪುರುಷರಿಗಷ್ಟೇ ಸೀಮಿತವಾಗದೆ "ಉದ್ಯೋಗಂ ಮನುಷ್ಯ ಲಕ್ಷಣಂ' ಎಂಬಂತಾಗಿದೆ. ಆದರೆ ಉದ್ಯೋಗವೆಂಬುದು ಸಾಮಾನ್ಯರ ಪಾಲಿಗೆ ಮರೀಚಿಕೆಯಾಗಿಬಿಟ್ಟಿದೆ. ಆದರೂ ಆ ಮರೀಚಿಕೆಯನ್ನು ಬೆನ್ನಟ್ಟದೇ ವಿಧಿಯಿಲ್ಲ. ಹಾಗೆ ಬೆನ್ನಟ್ಟುವಾಗ ಯುವ ಜನತೆಗೆ ತಮ್ಮ ಕೈಲಾದ ಸೇವೆ, ಮತ್ತು ಮಾರ್ಗದರ್ಶನ ನೀಡಬಲ್ಲ ಹಾಗೆಯೇ ಪ್ರಭಾವ ಬೀರಬಲ್ಲ. ಹಲವು ಜನರಿಗೆ ತಮ್ಮ ಪ್ರಭಾವ ಬಳಸಿ ಉದ್ಯೋಗ ದೊರಕಿಸಿಕೊಟ್ಟ, ಕೊಡಗಿನ ಹಿರಿಯ ಅನುಭವಿ, ಆದರೆ ಅಷ್ಟೇ ಸೌಮ್ಯ ಸ್ವಭಾವದ ರಾಜಕಾರಣಿ, ಪ್ರಸ್ತುತ ಜಾತ್ಯಾತೀತ ಜನತಾದಳದ ಜಿಲ್ಲಾ ಅಧ್ಯಕ್ಷ ಶ್ರೀ ಯಂಕನ ಉತ್ತಯ್ಯನವರು. ಅವರನ್ನು 'ಕೊಡಗು ಸಂಗಾತಿ' ಮಾತನಾಡಿಸಿದಾಗ ಅವರು ಬಿಚ್ಚಿಟ್ಟ, ಅವರ ಸೇವಾ ಬದುಕನ್ನು ನಿಮ್ಮ ಮುಂದಿಡುತ್ತಿದ್ದೇವೆ.

**ಕೊ. ಸಂ.: ತಮ್ಮ ಪರಿಚಯವನ್ನು ತಿಳಿಸುವಿರಾ?**

ಉ: ನಾನು ಯಂಕನ ಮುತ್ತಣ್ಣ ಮತ್ತು ಪೊನ್ನಮ್ಮ ದಂಪತಿಗಳ ಮಗನಾಗಿ 1934 ರಲ್ಲಿ ತನ್ನ ತಾಯಿ ತವರಾದ ಬಲಮರಿ ಗ್ರಾಮದ ಕಟ್ರತನ ಅಪ್ಪಯ್ಯನವರ ಮನೆಯಲ್ಲಿ ಜನಿಸಿದೆನು. ಸುಂಟಿಕೊಪ್ಪದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ, ಮಡಿಕೇರಿಯ ಸೈಂಟ್ ಮೈಕೆಲ್ಸ್‌ನಲ್ಲಿ ಹೈಸ್ಕೂಲ್ ವಿದ್ಯಭ್ಯಾಸ ಮುಗಿಸಿ, ಮಂಗಳೂರಿನ ಸೈಂಟ್ ಆಲೋಸಿಯಸ್‌ನಲ್ಲಿ ಸೀನಿಯರ್ ಇಂಟರ್‌ಮೀಡಿಯೆಟ್ ವಿದ್ಯಭ್ಯಾಸ ಮುಗಿಸಿ 1949 ರಲ್ಲಿ ನನ್ನ ಮನೆಗೆ ಹಿಂತಿರುಗಿ ರೈತಾಪಿ ಜೀವನವನ್ನು ಅವಲಂಬಿಸಿದೆನು.

**ಕೊ. ಸಂ: ನೀವು ರಾಜಕೀಯಕ್ಕೆ ಪಾದಾರ್ಪಣೆ ಮಾಡಲು ಪ್ರೇರಣೆಯೇನು?**

ಉ: ನಾನು ವಿದ್ಯಭ್ಯಾಸ ಮುಗಿಸಿ ಹಿಂತಿರುಗಿದ ಕೆಲವೇ ಸಮಯದಲ್ಲಿ, ಅಂದರೆ ಕೊಡಗು ರಾಜ್ಯವಾಗಿದ್ದ ಕಾಲದಲ್ಲಿ, 1952 ರಲ್ಲಿ ನಡೆದ ಮೊದಲ ಸಾರ್ವತ್ರಿಕ ಚುನಾವಣೆಯಲ್ಲಿ ಸಂಸತ್ ಸ್ಥಾನಕ್ಕೆ ನಿಡ್ಯಮಲೆ ಸೋಮಣ್ಣನವರು ಹಾಗೂ ರಾಜ್ಯ ಶಾಸಕಾಂಗಕ್ಕೆ ಗುಂಡುಕುಟ್ಟಿ ಮಂಜುನಾಥಯ್ಯನವರು ಸ್ಪರ್ಧಿಸಿದಾಗ, ಅವರ ಪರವಾಗಿ ಕಾಂಗ್ರೆಸ್ ಪಕ್ಷದ ಪ್ರಚಾರ ಕಾರ್ಯದಲ್ಲಿ ತೊಡಗಿ ಅವರ ಗೆಲುವಿಗೆ ಶ್ರಮಿಸಿದೆ. ನಾನು ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿ ನಾಯಕನಾಗಿ ಬೆಳೆದು ಬಂದಿದ್ದು ರಾಜಕೀಯ ಪಾದಾರ್ಪಣೆಗೆ ಮುಖ್ಯ ಕಾರಣವಾಯ್ತು.

**ಕೊ. ಸಂ.: ತಾವು ಯಾವ್ಯಾವ ಕ್ಷೇತ್ರದಲ್ಲಿ ಇದುವರೆಗೆ ಸೇವೆ ಸಲ್ಲಿಸಿದ್ದೀರಿ?**

ಉ: ನಾನು ಸುಂಟಿಕೊಪ್ಪದ ಕೋಪರೇಟಿವ್ ಬ್ಯಾಂಕ್‌ನಲ್ಲಿ 15 ವರುಷ ನಿರ್ದೇಶಕನಾಗಿ, ಕುಶಾಲನಗರದ ಹಣ್ಣು ಹಂಪಲು ಸೊಸೈಟಿಯಲ್ಲಿ 10 ವರ್ಷ ನಿರ್ದೇಶಕನಾಗಿ, ಹಾಸನ ಪ್ಲಾಂಟರ್ಸ್ ಬ್ಯಾಂಕಿನಲ್ಲಿ 6 ವರ್ಷ ನಿರ್ದೇಶಕನಾಗಿ, ಸೋಮವಾರ ಪೇಟೆ ಪಿ. ಎಲ್. ಡಿ. ಬ್ಯಾಂಕ್‌ನಲ್ಲಿ 15 ವರ್ಷ ನಿರ್ದೇಶಕನಾಗಿ ಕೊಡಗು ಕಾಫಿ ಬೆಳೆಗಾರರ ಸಂಘದಲ್ಲಿ 17 ವರ್ಷ ನಿರ್ದೇಶಕನಾಗಿ, 3 ವರ್ಷ ಅಧ್ಯಕ್ಷನಾಗಿ ಜನ ಮೆಚ್ಚಿನ ಕೆಲಸ ನಿರ್ವಹಿಸಿರುತ್ತೇನೆ. ಸುಂಟಿಕೊಪ್ಪದ ಉಲುಗುಲಿ ಗ್ರಾಮ ಪಂಚಾಯ್ತಿಯಲ್ಲಿ 6 ವರ್ಷ ಸದಸ್ಯನಾಗಿದ್ದು, 11 ವರ್ಷ ಅಧ್ಯಕ್ಷನಾಗಿ ಕಾರ್ಯನಿರ್ವಹಿಸಿ ರಾಜ್ಯದಲ್ಲಿ ಮಾದರಿ ಗ್ರಾಮಪಂಚಾಯ್ತಿಯನ್ನಾಗಿ ಪರಿವರ್ತಿಸಿ 1968 ರಲ್ಲಿ ರಾಜ್ಯ ಪ್ರಶಸ್ತಿಯನ್ನು ಅಂದಿನ ರಾಷ್ಟ್ರಪತಿ ಜಾಕೀರ್ ಹುಸೇನ್‌ರವರಿಂದ ಪಡೆದುಕೊಂಡಿರುತ್ತೇನೆ.

**ಕೊ. ಸಂ.: ರಾಜಕೀಯದಲ್ಲಿ ತಮ್ಮ ಪಾತ್ರವೇನು?**

ಉ: 1966 ರಲ್ಲಿ ಅಂದಿನ ಅವಿಭಾಜ್ಯ ಕಾಂಗ್ರೆಸ್ಸಿನಲ್ಲಿ ಜಿಲ್ಲಾ ಸದಸ್ಯನಾಗಿಯೂ, ಕಾಂಗ್ರೆಸ್ ಇಬ್ಭಾಗವಾದ ನಂತರ ಜನತಾ ಪಕ್ಷದಲ್ಲಿ ಜಿಲ್ಲಾ ಉಪಾಧ್ಯಕ್ಷನಾಗಿ ಕಾರ್ಯನಿರ್ವಹಿಸಿದ್ದೇನೆ. ಪ್ರಸ್ತುತ ಶ್ರೀ ಹೆಚ್. ಡಿ. ದೇವೇಗೌಡರ ಜಾತ್ಯಾತೀತ ಜನತಾದಳದ ಜಿಲ್ಲಾ ಅಧ್ಯಕ್ಷನಾಗಿ 1999 ರಿಂದೀಚೆಗೆ ದುಡಿಯುತ್ತಿದ್ದೇನೆ.

**ಕೊ. ಸಂ.: ಜಾತ್ಯಾತೀತ ಜನತಾದಳದ ಅಧ್ಯಕ್ಷರಾಗಿ ಪಕ್ಷವನ್ನು ಹೇಗೆ ಮುನ್ನಡೆಸುತ್ತಿದ್ದೀರಿ? ನಿಮ್ಮ ಪಕ್ಷಕ್ಕೆ ಭವಿಷ್ಯವಿದೆಯೇ?**

ಉ: ಜಾತ್ಯಾತೀತ ಜನತಾದಳ ಸಮಾಜದ ಸಾಮಾನ್ಯ ಜನರ ಪರವಾಗಿ, ಶೋಷಿತರ ಪರವಾಗಿ, ದಲಿತರ ಪರವಾಗಿ, ಅಲ್ಪಸಂಖ್ಯಾತರ ಪರವಾಗಿ, ಗ್ರಾಮೀಣ ಜನರ ಪರವಾಗಿ ದುಡಿಯುತ್ತಿರುವ ರಾಜಕೀಯ ಪಕ್ಷ. ಈಗ ಕೇಂದ್ರದಲ್ಲಿರುವ ಎನ್. ಡಿ. ಎ. ಸರಕಾರ ಜನರಿಗೆ ನೀಡಿದ ಭರವಸೆಗಳನ್ನು ಈಡೇರಿಸಲಾಗದೆ ತೆಹಲ್ಕಾದಂತಹ ಲಂಚ ಹಗರಣಗಳಲ್ಲಿ ಸಿಲುಕಿಕೊಂಡಿದೆ. ರಾಜ್ಯವನ್ನಾಳುತ್ತಿರುವ ಕಾಂಗ್ರೆಸ್, ಶ್ರೀಮಂತರ, ಉದ್ಯಮಿಗಳ, ನಗರ ಪ್ರದೇದವರ ಪರವಾಗಿ ಆಡಳಿತ ನಡೆಸುತ್ತಿದೆ. ಈ ದಿಸೆಯಲ್ಲಿ ಗ್ರಾಮೀಣ ಯುವ ಜನತೆ, ರೈತಾಪಿ ಬಂಧುಗಳು, ಕಾರ್ಮಿಕ ಬಂಧುಗಳು ನಮ್ಮ ಪಕ್ಷದತ್ತ ಒಲವು ತೋರುತ್ತಿದ್ದಾರೆ. ಜಿಲ್ಲೆಯಲ್ಲಿ ಯುವ ಉತ್ಸಾಹಿಗಳ ಮೂಲಕ ಪಕ್ಷವನ್ನು ಸಂಘಟಿಸಿ

ಕೋತಿ ತಾನು ಕೆಡುವುದಲ್ಲದೆ ವನವನ್ನೆಲ್ಲಾ ಕೆಡಿಸಿತಂತೆ

ಮುನ್ನಡೆಸಲಾಗುವುದು. ಮುಂದಿನ ಚುನಾವಣೆಯಲ್ಲಿ ಗೆಲುವು ನಮ್ಮದೇ. ಸರಕಾರ ನಮ್ಮದೇ ಎನ್ನುವ ಭರವಸೆ ನನಗಿದೆ.

**ಕೊ. ಸಂ.: ಗೌಡ ಜನಾಂಗಕ್ಕೆ ನಿಮ್ಮ ಕರೆ ಮತ್ತು ಸೇವೆಯೇನು?**

ಉ: ಗೌಡ ವಿದ್ಯಾಸಂಘದಲ್ಲಿ ನಾನು 15 ವರ್ಷ ನಿರ್ದೇಶಕನಾಗಿ ಕಾರ್ಯನಿರ್ವಹಿಸಿದ್ದೇನೆ. ಆಸಂದರ್ಭದಲ್ಲಿ ಗೌಡ ವಿದ್ಯಾಸಂಘ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸಿತ್ತು. ಈಗಲೂ ನಿರ್ವಹಿಸುತ್ತಿದೆ. ಗೌಡ ಯುವ ಜನಾಂಗ ದುಶ್ಚಟಗಳಿಗೆ ಬಲಿಯಾಗದೆ ವಿಶಾಲ ಕರ್ನಾಟಕದಲ್ಲಿ ಹೆಮ್ಮೆಯಿಂದ ಬದುಕುವಂತಾಗಬೇಕು. ಗೌಡ ಜನಾಂಗಕ್ಕೆ ಸರಕಾರದಿಂದ ಸೂಕ್ತ ಮೀಸಲಾತಿ ಸಿಗಬೇಕು. ಮಿಸಲಾತಿಗಾಗಿ ಹೋರಾಡುವ ಯಾವುದೇ ಹೋರಾಟಕ್ಕೆ ತಾನು ಹೆಗಲುಕೊಟ್ಟು ಸ್ಪಂಧಿಸಲು ಸದಾ ಸಿದ್ಧ.

ಸುಂಟಿಕೊಪ್ಪದಲ್ಲಿ ಅಗರ್ಭ ಶ್ರೀಮಂತರಾಗಿ ನೆಲೆಸಿರುವ ಶ್ರೀ ಯಂಕನ ಉತ್ತಯ್ಯನವರು ಹೃದಯ ಶ್ರೀಮಂತಿಕೆಯನ್ನು ಬೆಳೆಸಿಕೊಂಡವರು. ಕೊಡಗಿನ ಪ್ರಪಥಮ ಹಾಗೂ ಏಕೈಕ ಸಂಸತ್ ಸದಸ್ಯರಾಗಿದ್ದ, ಹಿರಿಯ ವಕೀಲರೂ ಆಗಿದ್ದ, ಹೆಮ್ಮೆಯ ಗೌಡ ಜನಾಂಗದ ಆಧಾರ ಸ್ತಂಭವಾಗಿದ್ದ ನಿಡ್ಯಮಲೆ ಸೋಮಣ್ಣನವರ ಪುತ್ರಿ ಗೌರಿಯವರನ್ನು ವಿವಾಹ ವಾಗಿರುವ ಇವರಿಗೆ ಮೂವರು ಮಕ್ಕಳು. ಮೂವರು ಪದವಿ ವಿದ್ಯಭ್ಯಾಸ ಪಡೆದಿದ್ದು ಪುತ್ರಿಯರಿಬ್ಬರೂ ವಿವಾಹವಾಗಿದ್ದು, ಪುತ್ರ ಮನೆಯ ವ್ಯವಹಾರ ನೋಡಿಕೊಳ್ಳುತ್ತಿದ್ದಾನೆ. ನಾಡಿನಾದ್ಯಂತ ಉನ್ನತ ವ್ಯಕ್ತಿಗಳೊಡನೆ ಸಂಪರ್ಕ, ಸಂಬಂಧ ಹೊಂದಿರುವ ಇವರು ಜನಾಂಗದಲ್ಲಿ ಇನ್ನು ಮೇಲಕ್ಕೇರಬೇಕಿತ್ತೆನ್ನುವುದು 'ಸಂಗಾತಿ' ಆಶಯ. ತಮ್ಮ ಪ್ರಭಾವದಿಂದ ಯುವ ಜನಾಂಗಕ್ಕೆ ಮಾರ್ಗದರ್ಶನ ಮಾಡಿ ಮುನ್ನಡೆಸಿ ತಮ್ಮ ಹೆಸರನ್ನು ಇನ್ನೂ ಶಾಶ್ವತಗೊಳಿಸಿಕೊಳ್ಳಲೆಂಬುದು 'ಸಂಗಾತಿ'ಯ ಹಾರೈಕೆ.

- ಬರಹ: ಪಟ್ಟಡ ಶಿವಕುಮಾರ

3 ನೇ ಪುಟದಿಂದ

ಅವರ ಸಹೋದರ ಕೆ. ಆರ್. ಧನಂಜಯ ಕುಮಾರ್‌ರವರು ಗೌಡ ಸಂಸ್ಕೃತಿ ಪ್ರಕಾರ ಅಗ್ನಿ ಸ್ಪರ್ಶ ಮಾಡಿದರು. ಈ ಸಂದರ್ಭದಲ್ಲಿ ಕೊಡಗು ಗೌಡ ಸಮಾಜದ ಅಧ್ಯಕ್ಷ ತೋಟಂಬೈಲು ನಾಣಯ್ಯನವರು ಹಾಗೂ ಕರ್ನಾಟಕ ರಾಜ್ಯದ ಸಚಿವರಾದ ಟಿ. ಜಾನ್‌ರವರು ಹಾಜರಿದ್ದು ಹಲವಾರು ಗಣ್ಯರು ಹಾಗೂ ನೆರೆದಿದ್ದ ಸಾವಿರಾರು ಮಂದಿಯ ದುಃಖದ ನಡುವೆಯೇ ವೀರ ಯೋಧ ಸುರೇಶನವರು ಭೂಮಂಡಲದಲ್ಲಿ ಲೀನರಾದರು. ಕೊಡಗಿನ ಕಲಿವೀರರ ಸಂತತಿಯ ಪುತ್ರರೊಬ್ಬರು ಈ ಮೂಲಕ ಭರತ ಭೂಮಿಗೆ ತನ್ನನ್ನು ಅರ್ಪಿಸಿ ಹುತಾತ್ಮರಾಗಿದ್ದು ಕೊಡಗಿನ ಮಟ್ಟಿಗೆ ಹೆಮ್ಮೆಯೆ ಸರಿ.

- ಬರಹ: ಪಟ್ಟಡ ಪ್ರಭಾಕರ

# ವೈಶಿಷ್ಟ್ಯಪೂರ್ಣ ಸಂಭ್ರಮದ ಯುಗಾದಿ

ನಮ್ಮ ಭವ್ಯ ಸಂಸ್ಕೃತಿಯ ಪ್ರತೀಕವಾಗಿರುವ ಯುಗಾದಿ ಸಂಭ್ರಮ, ಸಡಗರದ ಹಬ್ಬ. ಹೊಸ ವರ್ಷದ ಆಚರಣೆಯೊಂದಿಗೆ ಇಡೀ ಜೀವನದಲ್ಲಿ ಸುಖ ದುಃಖಗಳು ಹಾಸು ಹೊಕ್ಕಾಗಿ ಬರುತ್ತಿರುವುದನ್ನು, ಅವುಗಳನ್ನು ಸಮಾನ ಮನೋಭಾವದಿಂದ ಸ್ವೀಕರಿಸಬೇಕೆಂಬುದನ್ನು ಅರ್ಥವತ್ತಾಗಿ ಸಾರುವ ಹಬ್ಬ.

ಹಳೆಯದೆಲ್ಲ ಮರೆಯಿರೈ
ಹೊಸದು ಬಾಳ ತೆರೆಯಿರೈ
ಕಳೆದ ವರ್ಷಕ್ಕೆಂದು ಒಂದೆ
ಕಣ್ಣ ಹನಿಯ ಸಲಿಸಿರೈ
ಮುಪ್ಪು ಹರೆಯ ಮರೆಯುತ
ಬೆಪ್ಪ ಜಾಣ ಬರೆಯುತ....

ಎಂಬ ಕವಿವಾಣಿಯಂತೆ ಕಳೆದ ವರ್ಷ ನೋವು ನಲಿವುಗಳನ್ನು ಮರೆತು ಅದು ನೀಡಿದ ಅನುಭವದ ಮೇಲೆ ಹೊಸ ವರ್ಷಕ್ಕೆ ಕಾಲಿಡುವ ಯುಗಾದಿ, ಸುಖ ದುಃಖಗಳನ್ನು ಸಮಾನವಾಗಿ ಸ್ವೀಕರಿಸಿ ಬದುಕನ್ನು ನಡೆಸಬೇಕೆನ್ನುವ ತತ್ವವನ್ನು ಸಾರುತ್ತದೆ. ಇದು ಜೀವನದ ಮಹತ್ವ ಹಾಗೂ ಅರ್ಥ ಪೂರ್ಣ ಬದುಕನ್ನು ಪ್ರತಿಬಿಂಬಿಸುತ್ತದೆ.

ಎಲೆಗಳನ್ನೆಲ್ಲ ಕಳಚಿ ನಿಂತ ಮರದ ಕೊಂಬೆ ರೆಂಬೆಗಳ ತುದಿಯಲ್ಲಿ ಕಾಣಿಸಿಕೊಳ್ಳುವ ಚಿಗುರು ಬದುಕಿನ ಅದಮ್ಯ ಜೀವ ಸೆಲೆಯನ್ನು ನಮ್ಮ ಮುಂದಿಡುತ್ತದೆ. ಪ್ರಕೃತಿಯ ವ್ಯಾಪಾರದಲ್ಲಿ ನೀನೆಷ್ಟು ಕುಬ್ಜ ಎಂಬ ಭಾವನೆಯನ್ನು ಮೂಡಿಸಿ ನನ್ನನ್ನು ನೋಡಿ ಕಲಿ ಎಂದು ಮನುಷ್ಯನಿಗೆ ಕಿವಿಮಾತು ಹೇಳುತ್ತದೆ.

ಪ್ರಕೃತಿ ಮಾತೆ ಹೊಸ ರೂಪ ಧರಿಸಿ, ಹಚ್ಚ ಹಸಿರಿನ ಉಡುಗೆಯುಟ್ಟು, ಯುಗಾದಿಯನ್ನು ಬರಮಾಡಿಕೊಳ್ಳುತ್ತಾಳೆ. ಅಂತೆಯೇ ಉತ್ಸಾಹಿ ಮನುಷ್ಯ ಹೊಸ ಆಕಾಂಕ್ಷೆಯ ಸಂಕಲ್ಪ ದಿನವನ್ನಾಗಿ ಯುಗಾದಿಯನ್ನು ಆಹ್ವಾನಿಸುತ್ತಾನೆ.

ಚೈತ್ರ ಶುದ್ಧ ಪಾಡ್ಯದಂದು ಈ ಜಗತ್ತನ್ನು ಬ್ರಹ್ಮ ಸೃಷ್ಟಿಸಿದನೆಂದು ಬ್ರಹ್ಮ ಪುರಾಣದಲ್ಲಿ ಹೇಳಿದೆ. ಬ್ರಹ್ಮನು ಚೈತ್ರಮಾಸದ ಶುಕ್ಲ ಪಕ್ಷದ ಪ್ರಥಮ ದಿನದಂದು ಸುರ್ಯೋದಯದ ವೇಳೆಯಲ್ಲಿ ಗ್ರಹ, ಋತು, ತಿಂಗಳು, ಅಧಿಪತಿಗಳನ್ನೊಳಗೊಂಡಂತೆ ಸಮಸ್ತ ಲೋಕವನ್ನು ಸೃಷ್ಟಿಸಿದನೆಂದೂ ಕಾಲದ ಗಣನೆಯನ್ನೂ ಸಹ ಅಂದಿನಿಂದಲೇ ಆರಂಭಿಸಲಾಯಿತೆಂದು ಹೇಳುತ್ತಾರೆ. ಆ ಕಾರಣದಿಂದಲೇ ಯುಗಾದಿಯಂದು ಕೆಲವೆಡೆ ಬ್ರಹ್ಮನ ಪೂಜೆಯೂ ನಡೆಯುತ್ತದೆ.

ಚೈತ್ರ ಮಾಸದಿಂದಲೇ ಹಿಂದೂ ವರ್ಷವನ್ನು ಆರಂಭಿಸಿರುವುದು. ಈ ಹಿನ್ನಲೆಯಲ್ಲಿಯೇ, ಭೂಮಿಯೇ ಚಿಗುರೊಡೆದಂತೆ ಕಂಡು ಬರುವ ಚೈತ್ರ ಮಾಸದಿಂದ ಜೀವ ಸಂಕುಲಕ್ಕೆ ಹೊಸ ರೂಪ ಆರಂಭವಾಗುತ್ತದೆ. ಈ ಪ್ರಾಕೃತಿಕ ಪರಿಸರಕ್ಕೆ ಹೊಂದಿಕೊಂಡು ಬದುಕುವುದರ ಜೊತೆಗೆ ಮನುಷ್ಯ,

ದೈವದತ್ತವಾಗಿ ದೊರೆತಿರುವ ಈ ಮಾರ್ಗದರ್ಶನವನ್ನು ಅನುಸರಿಸುವುದು ಆತನ ಕರ್ತವ್ಯ.

ಯುಗಾದಿಯಂದು ಬೇವು ಬೆಲ್ಲವನ್ನು ತೆಗೆದುಕೊಳ್ಳುವುದು ರೂಢಿ. ಬೇವು ಕಷ್ಟ ನಷ್ಟಗಳ ಸಂಕೇತವಾದರೆ ಬೆಲ್ಲ ಸಂತೋಷ, ಸಮೃದ್ಧಿಯನ್ನು ಪ್ರತಿಬಿಂಬಿಸುತ್ತದೆ. ಬಾಳಿನಲ್ಲಿ ಕಹಿ ಮೊದಲು ಬರಲಿ, ನಂತರ ಸುಖ ಬರಲಿ ಎಂಬುದೇ ಬೇವು ಬೆಲ್ಲದ ಮಹತ್ವವಿರಬಹುದು. ಸುಖ ದುಃಖ ನೋವು ನಲಿವು ಸೋಲು ಗೆಲುವುಗಳು ಜೀವನದಲ್ಲಿ ಬೆರೆತಿರುವಂತೆ, ಮನುಷ್ಯನ ಬಾಳಿನಲ್ಲಿ ಸಿಹಿ ಕಹಿಗಳ ಜೋಡಣೆಯಾಗಿದೆ.

ವೈಜ್ಞಾನಿಕವಾಗಿ ಯೋಚಿಸಿದರೂ ಬೇವಿನಲ್ಲಿರುವ ಸತ್ವಗುಣ ಅಮೂಲ್ಯವಾದದು. ಬೇವಿನ ಚಿಗುರು, ಹೂವು, ಕಾಯಿ ಕಾಂಡ, ತೊಗಟೆಗಳೆಲ್ಲವೂ ರೋಗ ಪರಿಹಾರಕ ಹಾಗೂ ಶಕ್ತಿ ವರ್ಧಕವೆಂದು ಆಯುರ್ವೇದದಲ್ಲಿ ಹೇಳಿದೆ. ಬೇವಿನ ಸೇವನೆಯಿಂದ ದೇಹವು ವಜ್ರಕಾಯವಾಗುತ್ತದೆ. ಸಕಲ ರೋಗಗಳೂ ಅನಿಷ್ಟಗಳೂ ನಿವಾರಣೆಯಾಗಿ ಸರ್ವ ಸಂಪತ್ತೂ ನಮ್ಮದಾಗುತ್ತದೆಂದು ನಂಬಿಕೆ ಇದೆ. ಇದನ್ನೇ ಈ ಶ್ಲೋಕವು ಸಾರುತ್ತದೆ.

ಶತಾಯುರ್ವಜ್ರ ದೇಹಾಯ ಸರ್ವ ಸಂಪತ್ಕರಾಯ ಚ ಸುರ್ವಾರಿಷ್ಟ ವಿನಾಶಾಯ ನಿಂಬಕಂ ದಳ ಭಕ್ಷಣಂ. ಸೂರ್ಯ ಒಂದು ಪಥದಿಂದ ಇನ್ನೊಂದು ಪಥಕ್ಕೆ ತನ್ನ ಮಾರ್ಗವನ್ನು ಬದಲಿಸಿ ಬೆಂಕಿಯನ್ನು ಕಾರುತ್ತಿದ್ದರೂ,ಗಿಡಮರಗಳು ಹೂವು, ಚಿಗುರುಗಳ ಸೊಗಸಿನಿಂದ ಹೊಸ ಕಾಂತಿಯಿಂದ ಮಿರ ಮಿರನೆ ಮಿರುಗುತ್ತದೆ. ಅಂತೆಯೇ ಯುಗಾದಿ ಬಂದಿತೆಂದರೆ ಉರಿಯುವ ಬಿಸಿಲಿನಲ್ಲೂ ಜನರ ಸಡಗರ ಸಂಭ್ರಮಗಳು ಹೆಚ್ಚುತ್ತದೆ.

ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳಲ್ಲಿ ಬಹುತೇಕ ಚಾಂದ್ರಮಾನ ಯುಗಾದಿಯಂದು, ತಮಿಳುನಾಡಿನಲ್ಲಿ ಸೌರಮಾನ ಯುಗಾದಿಯಂದೂ, ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ಗುಡಿ ಹಬ್ಬವೆಂದು ಆಚರಣೆಯಲ್ಲಿದ್ದು, ಅಲ್ಪ ಸ್ವಲ್ಪ ಬದಲಾವಣೆ ಇದ್ದರೂ ಎಲ್ಲಾ ಕಡೆಯೂ ಬೇವು ಬೆಲ್ಲಕ್ಕೇ ಅಗ್ರಸ್ಥಾನ.

ಅಂದು ದೇವರಿಗೆ ಸಲ್ಲಿಸುವ ನೈವೇದ್ಯವಾಗಿರಲಿ, ಭಕ್ತರು ಸ್ವೀಕರಿಸುವ ಪ್ರಸಾದವಿರಲಿ ಎಲ್ಲವೂ ಬೇವು ಬೆಲ್ಲ ಮಯವಾಗಿರುತ್ತದೆ. ಇಂದು ನಮ್ಮ ಆಚರಣೆಗಳು ಏನೇ ಇರಲಿ ನಮ್ಮ ಭವ್ಯ ಸಂಸ್ಕೃತಿ ಮಾತ್ರ ಒಂದೇ ಎಂಬುದನ್ನು ಸೂಚಿಸುತ್ತದೆ.

ಗ್ರಾಮೀಣ ಪ್ರದೇಶಗಳಲ್ಲಿ ಯುಗಾದಿಯಂದು ಗತಿಸಿದ ತಮ್ಮ ಹಿರಿಯರಿಗೆ ಎಡೆಯಿಕ್ಕುವ ಸಂಪ್ರದಾಯವುಂಟು. ಅಂದು ಬೆಳಗ್ಗಿನಿಂದಲೇ ದನಕರುಗಳ ಮೈ ತೊಳೆದು ವ್ಯವಸಾಯೋಪಕರಣಗಳನ್ನೆಲ್ಲಾ ಶುಚಿ ಮಾಡಿ ಪೂಜಿಸಿ ವರ್ಷದ ವ್ಯವಸಾಯವನ್ನು- ಆರಂಭವನ್ನು ಪ್ರಾರಂಭಿಸುತ್ತಾರೆ. ಹೊಲಗಳನ್ನು ಉಳುಮೆ ಮಾಡುತ್ತಾ ಹಾರು ಹೊನ್ನಾರಾಗಲಿ, ಬೆಳೆ ಅದ್ದೂರಿಯಾಗಿ ಬರಲಿ ಎಂದು ದೇವರನ್ನು ಪ್ರಾರ್ಥಿಸುತ್ತಾರೆ.

ಯುಗಾದಿ ಬಂದಿತೆಂದರೆ ಪ್ರತಿಯೊಂದು ಊರಲ್ಲೂ ಮನೆಯಲ್ಲೂ ಸಡಗರ, ಸಂಭ್ರಮ, ಹೊಸತನದ ಉತ್ಸಾಹಗಳು ಕಂಡು ಬರುತ್ತವೆ. ಊರಿಗೆ ಊರೇ ಸಂಭ್ರಮದಲ್ಲಿ ಮುಳುಗುತ್ತದೆ. ಬಡವ ಬಲ್ಲಿದನೆಂಬ ಭೇದವಿಲ್ಲದೆ ಮನೆಗಳನ್ನು ಸುಣ್ಣ ಬಣ್ಣ ಹೊಡೆದು ಶುದ್ಧೀಕರಿಸುತ್ತಾರೆ. ಮನೆಯ ಬಾಗಿಲಿಗೆ ಮಾವು ಬೇವಿನ ತೋರಣಗಳನ್ನು ಕಟ್ಟಿ ಸಿಂಗರಿಸುತ್ತಾರೆ. ಎಲ್ಲರೂ ಅಭ್ಯಂಜನ ಸ್ನಾನ ಮಾಡಿ ಹೊಸ ಬಟ್ಟೆಗಳನ್ನು ಧರಿಸುತ್ತಾರೆ. ದೇವಾಲಯಗಳಿಗೆ ಹೋಗಿ ದೇವರಿಗೆ ಪೂಜೆಯನ್ನು ಸಲ್ಲಿಸಿ ಬರುತ್ತಾರೆ. ಬಂಧು ಮಿತ್ರರ ಮನೆಗೆ ಭೇಟಿ ಕೊಡುತ್ತಾರೆ. ಪ್ರೀತಿಯ ಮಾತನಾಡಿ ಮಾರನೆಯ ತೊಡಕಿನ ಊಟಕ್ಕೆ ಆಹ್ವಾನಿಸುತ್ತಾರೆ.

ಮನೆ ಮಂದಿಯೆಲ್ಲಾ ಬೇವು ಬೆಲ್ಲದೊಂದಿಗೆ ಹೋಳಿಗೆ ಊಟ ಮಾಡಿ ಸಂತೋಷ ಪಡುತ್ತಾರೆ. ಸಂಜೆಯಾಗುತ್ತಲೇ ದೇವಾಲಯಗಳಲ್ಲಿ ಅಥವಾ ಪುರೋಹಿತರ ಮನೆಗಳಲ್ಲಿ ನಡೆಯುವ ಪಂಚಾಂಗ ಶ್ರವಣದಲ್ಲಿ ಪಾಲ್ಗೊಳ್ಳುತ್ತಾರೆ.

ಪಂಚಾಂಗ ಶ್ರವಣದಿಂದ ಆ ವರ್ಷ ನಡೆಯಬಹುದಾದ ವಿದ್ಯಮಾನಗಳನ್ನು ಮಳೆ ಬೆಳೆಗಳನ್ನು ಫಲಗಳನ್ನು ವೈಯಕ್ತಿಕ ಗ್ರಹಗತಿಗಳನ್ನು ಕೇಳಿ ತಿಳಿದುಕೊಳ್ಳುತ್ತಾರೆ. ಯುಗಾದಿಯಂದು ಪಂಚಾಂಗವನ್ನು ಪಠಿಸುವುದರಿಂದ ಕೇಳುವುದರಿಂದ ತಮ್ಮ ಪಾಪ ಕಳೆದು ಆರೋಗ್ಯ ಪ್ರಾಪ್ತಿಯಾಗಿ ಆಯುಷ್ಯ ಹೆಚ್ಚಾಗುತ್ತದೆಂಬ ನಂಬಿಕೆ ಕೆಲವರದಾದರೆ, ಮತ್ತೆ ಕೆಲವರು ಅಂದು ಚಂದ್ರದರ್ಶನವನ್ನು ಮಾಡುವುದು ಶುಭಕರವೆಂದು ನಂಬುತ್ತಾರೆ.

ಗ್ರಾಮೀಣ ಪ್ರದೇಶಗಳಲ್ಲಿ ಯುಗಾದಿಗೆ ಕೊಡುವಷ್ಟೇ ಪ್ರಾಮುಖ್ಯತೆಯನ್ನು ಯುಗಾದಿಯ ಮಾರನೆಯ ದಿನಕ್ಕೂ ಕೊಡುತ್ತಾರೆ. ಬಯಲು ಸೀಮೆಯ ಮಾಂಸಾಹಾರಿ ಜನರಿಗಂತೂ ಯುಗಾದಿ ಎಂದರೆ ವರ್ಷದ ತೊಡಕಾದ ಎರಡನೆಯ ದಿನವೇ ನಿಜವಾದ ಹಬ್ಬ. ಬಂಧುಗಳನ್ನು ಇಷ್ಟ ಮಿತ್ರರನ್ನು ಮಾಂಸದೂಟದ ಭೋಜನಕ್ಕೆ ಆಹ್ವಾನಿಸುವುದರಲ್ಲಿ ಅದೇನು ಸಂಭ್ರಮ, ಅದೇನು ಸಡಗರ, ನೆಂಟರಿಷ್ಟರು ಮಿತ್ರರು ಉಂಡು ತಿಂದು ನಕ್ಕು ನಲಿಯುತ್ತಾರೆ. ಹಾಗಾಗಿ ಇವರಿಗೆ ಯುಗಾದಿಯ ಸಂಭ್ರಮ ಸಡಗರ ಬೇರಾವ ಹಬ್ಬಗಳಲ್ಲೂ ಕಂಡು ಬರುವುದಿಲ್ಲ.

ಇಂದಿನ ಯಾಂತ್ರಿಕ ಬದುಕಿನಲ್ಲಿ ಅಥವಾ ಆರ್ಥಿಕ ಪರಿಸ್ಥಿತಿಯಿಂದಾಗಿ ಹಬ್ಬಗಳು ಒಂದು ಕ್ರಿಯೆಯಂತೆ ನಡೆಯುತ್ತಿರಬಹುದು. ಆದರೂ ಈ ಎಲ್ಲದರ ನಡುವೆಯೂ ಉತ್ಸವವಾಗಿ ಹೊಸ ಚೈತನ್ಯವನ್ನು ಸಂತೃಪ್ತಿ ಸಮೃದ್ಧಿಯ ಸಂದೇಶವನ್ನು ಸಾರುತ್ತಿದೆ. ದುಃಖವನ್ನು ಮರೆತು ನೋವು ನಲಿವನ್ನು ಹಂಚಿಕೊಂಡು ನಡೆಯುವಂತೆ ಪ್ರೇರೇಪಿಸುತ್ತದೆ. ಯುಗಾದಿ ಕವಿವಾಣಿಯಂತೆ ಜನತೆಯ ಹೊಂಗನಸುಗಳನ್ನು ಸಾಫಲ್ಯಗೊಳಿಸಲೆಂಬುದೇ ನಮ್ಮೆಲ್ಲರ ಶುಭ ಹಾರೈಕೆ.

- ಸಂಗಾತಿ

# ಪ್ರಯತ್ನ ಬೇಕ್

ಪರೀಕ್ಷೆಗೆ ಕೂರವು ಪಾಸಾಕು ತ್ತೇಳಿಕಂಡ್ ನಿದ್ದೆ, ಊಟಿಸ ಸರಿಯಾಗಿ, ತಕ್ಕಣ್ಣದೆ ಪ್ರಯತ್ನ ಪಟ್ಟವೆ. ವ್ಯಾಪಾರಿ ತನ್ನ ಲಾಭಕ್ಕಾಗಿ ರಾತ್ರಿ ಹಗಲ್‌ತ್ ಗ್ಯಾನ ಮಾಡದೆ ದುಡ್ಡದೆ. ವಿಜ್ಞಾನಿ ತಾನ್ ಮಾಪ್ಪ ಶೋಧನೆಗಾಗಿ ಹೊರ ಪ್ರಪಂಚನೆ ಮರ್‌ತದೆ. ಸುರುಗೆ ತ್ವಾಟ ಮಾಡವು ತನ್ನ ಸುಖನ್ನೆಲ್ಲಾ ಮರ್‌ತ್‌ಕಂಡ್ ಕಷ್ಟ ಪಟ್ಟವೆ. ಹಿಂಗೆ ಒಬ್ಬೊಬ್ಬ, ಒಂದೊಂದ್ ಕೆಲ್ಸಲಿ ಲೋಕವೆ ಮರ್‌ತವೆ. ಆದ್ರೂಸ ನೀತಿ, ನಡ್ತೆ, ಶೀಲ ಸಭ್ಯತೆಗಾಗಿ ಪ್ರಯತ್ನ ಪಡವು ಬಹಳ ಕಮ್ಮಿ. ಅಂತದಕ್ಕೆ ಬೆಲೆ ಕೊಡುವು ಕಮ್ಮಿ. ಈ ಕಾರಣಕ್ಕೇನೊ ನೀತಿ ನಡತೆಗಾಗಿ ಕಷ್ಟ ಪಡಿಕೆ ಹೋಗ್ದು, ಮನುಷ್ಯನ ಯೋಗ್ಯತೆಗೆ ಬೆಲೆ ಕೊಡ್ದುಲೆ. ಅಂವನ ಬಟ್ಟೆ, ಬರೆ ಹಣಕ್ಕೆ ಬೆಲೆ ಕಟ್ಟವೆ. ಶಾಶ್ವತ ಸುಖ ಶಾಂತಿಗೆ ದಾರಿ ಕಂಡ್ ಹಿಡಿಯದು ಬುಟ್ಟ್ ದುಃಖ ಅಶಾಂತಿನ ದಾರಿ ಹಿಡಿಯದು ತಪ್ಪು. ಶಾಶ್ವತ ಸುಖ ಶಾಂತಿಗಾಗಿ ಒಳ್ಳೆ ನಡ್ತೆಗೆ ಸತತ ಪ್ರಯತ್ನ ಬೇಕ್.

ಕೊಡವ ಭಾಷೆಲಿ : ಚೇಂದ್ರಿಮಾಡ ಮುತ್ತಪ್ಪ
ಅರೆಗನ್ನಡ ಭಾಷೆಗೆ : ಪಟ್ಟಡ ಪ್ರಭಾಕರ

# ಅಮೃತ ಬಿಂದು - ದೇಹ

ನಮ್ಮ ದೇಹವನ್ನು ನೋಡಿ, ಅದು ಒಂದು ರೀತಿಯಲ್ಲಿ ವಾಶಿಂಗ್ ಮೆಶಿನ್ ಇದ್ದ ಹಾಗೆ. ನಮ್ಮ ಮನಸ್ಸು ಬಟ್ಟೆ ಇದ್ದಂತೆ.

ಪ್ರೀತಿ ಯೆಂಬುದು ಶುದ್ಧ ನೀರು, ಜ್ಞಾನವೆಂಬುದು ಸೋಪ್ ಪೌಡರ್ ಇದ್ದಂತೆ.

ನಮ್ಮ ದೇಹಕ್ಕೆ ಎಲ್ಲವನ್ನೂ ಶುದ್ಧ ಗೊಳಿಸುವ ಶಕ್ತಿಯಿದೆ. ಪ್ರೀತಿಯೆಂಬ ನೀರಿನಿಂದ ಜ್ಞಾನವೆಂಬ ಸೋಪ್ ಪೌಡರ್‌ನಿಂದ ಮನಸ್ಸೆಂಬ ಬಟ್ಟೆಯನ್ನು ಶುದ್ಧವಾಗಿ ತೊಳೆದುಹಾಕುತ್ತದೆ.

ನಮ್ಮ ದೇಹದೊಳಗೆ ಹೀಗೆ ಬಟ್ಟೆ ತೊಳೆಯುವ ಕ್ರಿಯೆ ನಿರಂತರವಾಗಿ ನಡೆಯುತ್ತಲೇ ಇರುತ್ತದೆ.

ನಮ್ಮ ದೇಹ ಎಂದೂ ವಿಶ್ರಾಂತಿ ಪಡೆಯದ ಗಡಿಯಾರದಂತೆ, ಕಾಲನಂತೆ, ಉಸಿರಿರುವ ತನಕವೂ ಕ್ರಿಯಾಶೀಲವಾಗಿರುತ್ತದೆ. ನಾವು ನಿದ್ದೆಯಲ್ಲಿದ್ದಾಗ ಸಹ ದೇಹ ಎಂದಿನಂತೆ ಕಾರ್ಯನಿರತವಾಗಿರುತ್ತದೆ. ದೇಹಕ್ಕೆ ದಣಿವಾಗಬಹುದು. ಆದರೆ ಏನೂ ಕೆಲಸ ಇಲ್ಲ ಎಂಬುದಿಲ್ಲ. ದೇಹದ ಶಕ್ತಿಯೇ ಅಂಥದ್ದು.

ಈ ದೇಹವನ್ನು ಒಳ್ಳೆಯ ಕೆಲಸಕ್ಕೆ ತೊಡಗಿಸಿಕೊಳ್ಳೋಣ.

ಸ್ವಾಮಿ - ಶ್ರೀ ಶ್ರೀ ರವಿಶಂಕರ

# ಹಳೆಗನ್ನಡದ ಮೇಲೆ ಹವ್ಯಕರ ಭಾಷೆಯ ಪ್ರಭಾವ

ಹವ್ಯಕ ಬ್ರಾಹ್ಮಣರು ಕರ್ನಾಟಕದ ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಅಧಿಕ ಸಂಖ್ಯೆಯಲ್ಲೂ ಕೊಡಗು, ಚಿಕ್ಕ ಮಂಗಳೂರು, ಮತ್ತಿತರ ಕಡೆಗಳಲ್ಲಿ ವಿರಳವಾಗಿಯೂ ನೆಲೆಸಿದ್ದಾರೆ. ಇದಲ್ಲದೆ ಕೇರಳದ ಕಾಸರಗೋಡು ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಇವರ ಭಾಷೆ ಹಳೆಗನ್ನಡದ ಮತ್ತು ಪೂರ್ವದ ಹಳೆಗನ್ನಡದ ಕೆಲವು ಛಾಯೆಗಳನ್ನು ಒಳಗೊಂಡಿದೆ. ಇದು ಶಿಷ್ಟ ಕನ್ನಡಕ್ಕಿಂತ ಭಿನ್ನವಾಗಿದೆ. ಇದನ್ನು ಕನ್ನಡದೊಂದು ಉಪಭಾಷೆ ಎನ್ನಬಹುದು.

ಹತ್ತು ಕುಟುಂಬ, ಹದಿನೆಂಟು ಗೋತ್ರಕ್ಕೆ ಸೇರಿದ ಗೌಡರು ಕರ್ನಾಟಕದ ದಕ್ಷಿಣಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲೂ ಕೇರಳದ ಕಾಸರಗೋಡು ತಾಲೂಕಿನಲ್ಲೂ ವಾಸಿಸುತ್ತಿದ್ದು ಇವರು ತುಳು ಮತ್ತು ಅರೆಗನ್ನಡ ಭಾಷೆಗಳನ್ನಾಡುತ್ತಾರೆ. ಅರೆಗನ್ನಡ ಭಾಷೆ ಹವ್ಯಕರ ಭಾಷೆಯಂತೆ ಕನ್ನಡದ ಹಿಂದಿನ ರೂಪಾಂತರ ನಡುಗನ್ನಡ ಭಾಷೆಯಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಕೋಟ ಬ್ರಾಹ್ಮಣರ ಮತ್ತು ಹವ್ಯಕರ ಕನ್ನಡ ಭಾಷೆಯಲ್ಲಿ ಸಾಕಷ್ಟು ಸಾಮ್ಯವಿದ್ದರೂ ಅವುಗಳು ಒಂದೇ ಅಲ್ಲ. ಅಂತೆಯೇ ಗೌಡರ ಅರೆಗನ್ನಡ ಭಾಷೆ ಮತ್ತು ಹವ್ಯಕರ ಕನ್ನಡ ಭಾಷೆಗಳ ನಡುವೆ ಬಹಳಷ್ಟು ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಈ ಎರಡು ಸಮೂಹಗಳು ಒಂದೇ ಭೂ ಪ್ರದೇಶದಲ್ಲಿ ಹಿಂದಿನಿಂದಲೂ ಸಹಬಾಳ್ವೆ ನಡೆಸಿದುದರ ಫಲವಾಗಿ ಭಾಷೆಯಲ್ಲಿ ಮುಖ್ಯವಾಗಿ ಬಹುವಚನ ಪ್ರತ್ಯಯಗಳು, ತದ್ಧಿತ ಪ್ರತ್ಯಯಗಳು ಮತ್ತು ಕೆಲವು ಅವ್ಯಯಗಳ ಬಳಕೆಯಲ್ಲಿ ಒಂದು ಬಗೆಯ ಸಂಬಂಧವನ್ನು ಗುರ್ತಿಸಬಹುದಾಗಿದೆ.

ಭಾಷೆಯಂತೆ ಧಾರ್ಮಿಕ ಪರಂಪರೆಯಲ್ಲೂ ಇದೇ ಬಗೆಯ ಸಂಬಂಧವನ್ನೂ ಕಾಣಬಹುದಾಗಿದೆ. ಆದಿ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟ, ಗೋಕರ್ಣದ ರಘೋತ್ತಮಮಠ ಹವ್ಯಕರ ಗುರು ಮಠವಾಗಿದ್ದರೆ ಅದೇ ಯತಿವರ್ಯರಿಂದ ಸ್ಥಾಪನೆಗೊಂಡ ಶೃಂಗೇರಿಯ ಶಾರದಾಪೀಠ ಸಕಲ ಸ್ಮಾರ್ತರ ಗುರು ಮಠವಾಗಿರುವಂತೆ ನಮ್ಮ ಜನಾಂಗದವರ ಗುರುಮಠ ಸಹ ಆಗಿದೆ.

ಹವ್ಯಕರ ಮತ್ತು ಗೌಡ ಜನಾಂಗದವರ ಕನ್ನಡದ ಭಾಷೆಗಳಲ್ಲಿ ಕಂಡು ಬರುವ ಕೆಲವು ಹೋಲಿಕೆಗಳನ್ನು ಉದಾಹರಣೆ ಸಹಿತ ಕೆಳಗೆ ಕೊಡಲಾಗಿದೆ.

1. ಹವ್ಯಕರ ಭಾಷೆಯಲ್ಲಿ ಬಹುವಚನ ಪ್ರತ್ಯಯಗಳಾಗಿ ಗೊ ಮತ್ತು ಕ್ಕೊ- ಎಂಬವು (ಗಳ್, ಕಳ್, ಎಂಬಿವಕ್ಕೆ ಬದಲಾಗಿ) ಬರುತ್ತವೆ.

ಉದಾ:

| | |
|---|---|
| ಜನಂಗೊ (ಜನರು) | ಮಕ್ಕೊ (ಮಕ್ಕಳು) |
| ಮರಂಗೊ (ಮರಗಳು) | ಹೆಮ್ಮಕ್ಕೊ (ಹೆಂಗಸರು) |

ಮಂಗಗೊ (ಮಂಗಗಳು) ಅಬ್ಬೆಕ್ಕೊ (ತಾಯಂದಿರು)
ನಿಂಗೊ (ನೀವು), ಎಂಗೊ (ನಾವು) ತೆಂಗೆಕ್ಕೊ (ತಂಗಿಯರು)

ಅರೆಗನ್ನಡ ಭಾಷೆಯಲ್ಲಿ ಬಹುವಚನ ಪ್ರತ್ಯಯಗಳಾಗಿ ಮತ್ತು ಕ ಅಥವಾ ಕ್ಕ- ಎಂಬವುಗಳು ಬರುತ್ತವೆ.

ಉದಾ:

ಜನಗ (ಜನರು) ಪಿಳ್ಳೆಕ (ಮೊಮ್ಮಕ್ಕಳು)
ಮರಗ (ಮರಗಳು) ಸೊಸೆಕ (ಸೊಸೆಯಂದಿರು)
ಮಂಗಗ (ಮಂಗಗಳು) ಅಬ್ಬೆಕ (ತಾಯಂದಿರು)
ದನಗ (ದನಗಳು) ಅತ್ತೆಕ (ಅತ್ತೆಯಂದಿರು)
ಗದ್ದೆಗ (ಗದ್ದೆಗಳು) ತಂಗೆಕ (ತಂಗಿಯರು)
ತೋಟಗ (ತೋಟಗಳು) ಮಗಕ (ಮಂಗಳಂದಿರು)
ಹಟ್ಟಿಗ (ಹಟ್ಟಿಗಳು) ಅಜ್ಜಿಕ (ಅಜ್ಜಿಯರು)
ಮಕ್ಕ (ಮಕ್ಕಳು)
ಗಂಡ್ಮಕ್ಕ (ಗಂಡುಮಕ್ಕಳು)
ಹೆಣ್ಮಕ್ಕ (ಹೆಣ್ಮಕ್ಕಳು)

ಇತ್ಯಾದಿ.

2. ಹವ್ಯಕರ ಭಾಷೆಯಲ್ಲಿ ಹ್ರಸ್ವ ವ್ಯಂಜನದ ಮುಂದೆ ತನ, ತಿಕೆ ಎಂಬ ತದ್ದಿತ ಪ್ರತ್ಯಯಗಳು ಬಂದಾಗ ಕೆಲವೆಡೆ ವ್ಯಂಜನಕ್ಕೆ ಸಕಾರ ಸೇರಿಕೊಳ್ಳುತ್ತದೆ.

ಉದಾ:

ಬಡಸ್ತನ
ಬಡಸ್ತಿಕೆ
ದೊಡ್ಡಸ್ತನ
ದೊಡ್ಡಸ್ತಿಕೆ
ನೆಂಟಸ್ತನ
ನೆಂಟಸ್ತಿಕೆ

ಅರೆಗನ್ನಡ, ಭಾಷೆಯಲ್ಲಿಯೂ ಮೇಲಿನಂತೆ ಬದಲಾವಣೆಗಳಾಗುತ್ತವೆ.

3. ಹವ್ಯಕರ ಭಾಷೆಯಲ್ಲಿ 'ಬೇಕು' ಎಂಬುದು 'ಎಕ್ಕು' ಎಂಬ ರೂಪದಲ್ಲಿದೆ.

ಉದಾ:

ಮಾಡೆಕ್ಕು (ಮಾಡಬೇಕು)
ನೋಡೆಕ್ಕು (ನೋಡಬೇಕು)
ನಿಲ್ಲೆಕ್ಕು (ನಿಲ್ಲಬೇಕು)
ಓದೆಕ್ಕು (ಓದಬೇಕು)

ಅರೆಗನ್ನಡ ಭಾಷೆಯಲ್ಲಿ ಅದು ' ಅಕು' ಎಂಬ ರೂಪದಲ್ಲಿದೆ.

ಉದಾ:

ಮಾಡಕು ಹೋಕು ಬಾಕು
ನೋಡಕು ಕುಡಿಯಕು ಮುರಿಯಕು
ನಿಲ್ಲಕು ಉಂಬಕು ಹೊರಕು
ಓದಕು ತಿಂಬಕು ತೆಗಿಯಕು
ಬರಿಯಕು ಮಲ್ಗಕು ಆಡಕು

ಇತ್ಯಾದಿ.

4. ನಡುಗನ್ನಡದಲ್ಲಿ ಕಂಡು ಬರುವ 'ಗಡ (ಅಂತೆ) ಎಂಬ ಅವ್ಯಯವು ಹವ್ಯಕರ ನುಡಿಯಲ್ಲಿ 'ಅಡ ಇಲ್ಲವೇ' ಅಡೊ ಎಂಬ ಹೊಸ ರೂಪದಲ್ಲಿದೆ.

ಉದಾ:

ಕಾಗೆ ಬಂತಡೊ (ಕಾಗೆ ಬಂತಂತೆ)
ಆನು ಬರೆಯೆಕ್ಕಡ (ನಾನು ಬರೆಯಬೇಕಂತೆ)
ಇಲ್ಲೆಡ (ಇಲ್ಲವಂತೆ)

ಅರೆಗನ್ನಡ ಭಾಷೆಯಲ್ಲಿ ನಡು ಗನ್ನಡದ 'ಗಡ ಎಂಬ ಅವ್ಯಯವು ಕೆಲವೆಡೆ ಯಥಾವತ್ ಕಂಡು ಬಂದರೆ ಇತರೆಡೆ ಅಡ ಎಂಬ ರೂಪ ಕಂಡು ಬರುತ್ತದೆ

ಉದಾ:

ಅತ್ತೆ ಹೋದವೆಗಡ (ಅತ್ತೆ ಹೋಗುತ್ತಾರಂತೆ)
ಮಾಂವ ಬಂದವೆಗಡ (ಮಾಂವ ಬರುತ್ತಾರಂತೆ)
ಕೂಸು ಬೀತ್‌ಗಡ (ಮಗು ಬಿದ್ದಿತಂತೆ)
ಅಂವ ಎದ್ದತ್‌ಗಡ (ಅವನು ಎದ್ದನಂತೆ)
ನೀನ್ ಬೇಗ ಹೋಕಡ (ನೀನು ಬೇಗ ಹೋಗಬೇಕಂತೆ)
ನೀನ್ ಕಾಗದ ಬರಿಯಕಡ (ನೀನು ಕಾಗದ ಬರೆಯಬೇಕಂತೆ)
ನೆಂಟ್ರ್ ಊಟಕೆ ಬಾಕಡ (ನೆಂಟರು ಊಟಕ್ಕೆ ಬರಬೇಕಂತೆ
)

ಇತ್ಯಾದಿ.

5. ಹವ್ಯಕರ ಭಾಷೆಯಲ್ಲಿ ಕಂಡು ಬರುವ ಸಬಿಂದು ಪದಗಳು ಅರೆಗನ್ನಡ ಭಾಷೆಯಲ್ಲೂ ಕಂಡುಬರುತ್ತವೆ.

ಉದಾ:

ಹೇಂಗೆ - ಹಂಗೆ
ಎಂತದ್ದು - ಎಂತದ್
ಎಂಥ - ಎಂತ
ತಪ್ಪೆಂಥ - ತಪ್ಪೆಂತ
ಹೇಂಗೂ - ಹಂಗೂ
ಹಾಂಗಾಗೇ - ಹಂಗಾಗಿ
ಹಾಂಗೆ - ಹಂಗೆ

ಇತ್ಯಾದಿ

ಲೇಖನ: ಕುಲ್ಲಚನ ಕಾರ್ಯಪ್ಪ, ಕುಂಬಳದಾಳು ಗ್ರಾಮ.
ಪ್ರೊ. ಟಿ. ಕೇಶವಭಟ್ಟ ಸಲಹೆ, ಸಹಕಾರ,
ಆಧಾರ ಗ್ರಂಥ:- ಹವ್ಯಕರ ಶೋಭಾನೆಗಳು
ಡಾ॥ ಕೆ. ಎಸ್. ಭಟ್ ಮತ್ತು ಮನೆಯವರು, ಭಾಗಮಂಡಲ.

# ದೇಶ ಕಟ್ಟುವಲ್ಲಿ ಯುವ ಜನರ ಪಾತ್ರ

"ನನಗೆ ಕೆಲವೇ ಕೆಲವು ಯುವಶಕ್ತಿಯನ್ನು ಕೊಡಿ ನಾನು ಪ್ರಪಂಚವನ್ನೇ ಆಮೂಲಾಗ್ರವಾಗಿ ಬದಲಾಯಿಸುತ್ತೇನೆ"- ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದರು. ಅವರ ಆ ಮಾತೇ ಸಾಕು ರಾಷ್ಟ್ರ ನಿರ್ಮಾಣದಲ್ಲಿ ಅಥವಾ ರಾಷ್ಟ್ರನಿರ್ಮಾಣದಲ್ಲಿ ಯುವ ಜನತೆಯ ಪಾತ್ರ ತಿಳಿಯಲು!

ಜಗತ್ತಿನಲ್ಲಿ ಎಲ್ಲಾ ದೇಶಗಳಲ್ಲಿ ಎಲ್ಲಾ ಕಾಲಗಳಲ್ಲಿ ಆಗಿರುವ ಬದಲಾವಣೆಗಳ ಹಿಂದೆ ಯುವಶಕ್ತಿಯು ಮಹತ್ತರ ಪಾತ್ರ ವಹಿಸಿದೆ. ಉತ್ಸಾಹ ಕ್ರೀಯಾಶೀಲತೆ, ಕಲ್ಪನಾಶಕ್ತಿ ಇವುಗಳು ಯೌವನದ ಮುಖ್ಯ ಲಕ್ಷಣಗಳೆಂದು ಹೇಳುವುದಾದರೆ, ಯಾಕೆ ನಮ್ಮ ದೇಶದ ಯುವಕರು ಇಷ್ಟೊಂದು ಅಸ್ವಸ್ಥರಾದಂತೆ ಕಂಡು ಬರುತ್ತಾರೆ? ಬಹುಶಃ ಸ್ವಾತಂತ್ರ್ಯ ಪೂರ್ವದಲ್ಲಿ ಯುವ ಜನತೆಗೆ ದೊರೆತಂತಹ ಮಾರ್ಗದರ್ಶನ ಸತ್ವಗಳಾಗಲಿ ನಿರ್ದಿಷ್ಟ, ಹಾಗೂ ದೊಡ್ಡ ಗುರಿಯಾಗಲಿ, ನಿಜವಾದ ಮೌಲ್ಯವಾಗಲಿ, ಗಟ್ಟಿ ವ್ಯಕ್ತಿತ್ವವಾಗಲಿ ಈ ದಿನ ಇಲ್ಲದಿರುವುದು ಅವರ ಇಂದಿನ ಅಸ್ವಸ್ಥತೆಗೆ ಕಾರಣ ಇರಬಹುದು.

ರಾಷ್ಟ್ರಕವಿ ಕುವೆಂಪುರವರ ಧೀರವಾಣಿಯಂತೆ,

ಅಂದೊ? ಹಿಂದಕ್ಕೆ ಗುರುವಿದ್ದ, ಮುಂದಕ್ಕೆ ಗುರಿಯಿತ್ತು,<br>
ನುಗ್ಗಿದುದು ಧೀರರ ದಂಡು<br>
ಇಂದೊ? ಹಿಂದಕ್ಕೆ ಗುರುವಿಲ್ಲ ಮುಂದಕ್ಕೆ ಗುರಿಯಿಲ್ಲ<br>
ಮುಗ್ಗುತ್ತಿದೆ ಹೇಡಿಗಳ ಹಿಂಡು

ಈ ಮಾತು ಎಷ್ಟು ಸತ್ಯ ಅಲ್ಲವೆ? ಹಿಂದೆ ಯುವ ಪೀಳಿಗೆಯನ್ನು ಮಹಾತ್ಮ ಗಾಂಧೀಜಿ, ಸುಭಾಷ್ ಚಂದ್ರಬೋಸ್ ಇನ್ನಿತರರು ಸನ್ಮಾರ್ಗದಲ್ಲಿ ನಡೆಸುತ್ತಿದ್ದರು, ಅಂದಿನ ವಿದ್ಯಾರ್ಥಿಗಳಿಗೆ, ಸ್ವಾಭಿಮಾನ, ಛಲ, ರಾಷ್ಟ್ರಪ್ರೇಮ ಇತ್ತು. ಅಂದು ವಿದ್ಯಾರ್ಥಿಗಳು ರಾಷ್ಟ್ರಕ್ಕಾಗಿ ತಮ್ಮ ಶಾಲಾ-ಕಾಲೇಜುಗಳನ್ನು ತೊರೆದು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ಆದರೆ ಇಂದು ಯುವ ಪೀಳಿಗೆ ಪಾಶ್ಚಾತ್ಯ ಮೋಡಿಯೊಳಗೆ ಸಿಲುಕಿದೆ, ರಾಷ್ಟ್ರಭಕ್ತಿ ಕಡಿಮೆಯಾಗಿದೆ.

ಇಂದು ಪಟ್ಟಭದ್ರಹಿತಾಸಕ್ತಿಯುಳ್ಳ ರಾಜಕಾರಣಿಗಳು ಯುವ ಜನತೆಯನ್ನು ತಮ್ಮ ಕೈಯೊಳಗಿನ ಸ್ಫೋಟಕಗಳಂತೆ ಬಳಸಿಕೊಳ್ಳುತ್ತಿದ್ದಾರೆ. ಇಂದು ಯುವಜನತೆ ಇವುಗಳ ವಿರುದ್ಧ ಸಿಡಿದೆದ್ದು, ರಾಷ್ಟ್ರ ಕಟ್ಟುವಲ್ಲಿ ಮಹತ್ತರ ಪಾತ್ರವನ್ನು ವಹಿಸಬೇಕಾಗಿದೆ. ದುಷ್ಟ ಮಾರ್ಗದಲ್ಲಿ ನಡೆದು, ಶೀಘ್ರ ಹಣ ಮಾಡುವ ದುರಾಲೋಚನೆಯನ್ನು ಬಿಟ್ಟು, ಪ್ರಾಮಾಣಿಕತೆಯಿಂದ ಸನ್ಮಾರ್ಗದಲ್ಲಿ ನಡೆದರೆ, ಅದಕ್ಕಿಂತ ಉತ್ತಮ ಕಾರ್ಯ ಮತ್ತೊಂದಿಲ್ಲ.

ಇಂದು ಭಾರತ ನಿರುದ್ಯೋಗದ ತವರೂರಾಗಿದೆ. ನಿರುದ್ಯೋಗಿಗಳು ದಿನೇ ದಿನೇ ಬೆಳೆಯುತ್ತಾ ಹೋಗುತ್ತಿದ್ದಾರೆ. ಇಂದು ಹೊಟ್ಟೆ, ಪಾಡಿಗಾಗಿ ಇನ್ನೊಬ್ಬರ ತಲೆಯೊಡೆದು ಬದುಕುವತ್ತ ಹೆಜ್ಜೆ ಹಾಕಿದ್ದಾರೆ. ದರೋಡೆ, ಕಳ್ಳ ವ್ಯಾಪಾರ ಇವುಗಳನ್ನೆಲ್ಲಾ ಸುಲಲಿತವಾಗಿ ನಡೆಸುತ್ತಿದ್ದಾರೆ. ಇಂತಹ ಸಮಾಜ ಕಂಟಕ ವೃತ್ತಿಗಳಲ್ಲಿ ಕೈ ಹಾಕಿದ ಯುವ ಜನತೆ ರಾಷ್ಟ್ರ ಕಟ್ಟುವ, ಬದಲು, ರಾಷ್ಟ್ರವನ್ನ ಉರುಳಿಸ ಹೊರಟಿದ್ದಾರೆ. ದೇಶ ದ್ರೋಹಿ ಯುವಕರು ನಮ್ಮ ದೇಶದ ರಹಸ್ಯವನ್ನು ಶತ್ರುದೇಶಕ್ಕೆ ರವಾನಿಸುವುದನ್ನು ಗಮನಿಸಿದ್ದಲ್ಲಿ ಯುವ ಜನರ ಪಾತ್ರ(?) ವನ್ನು ತಿಳಿಯಬಹುದು.

ಇಂದಿನ ವಿದ್ಯಾರ್ಥಿಗಳೇ.... ಮುಂದಿನ ಪ್ರಜೆಗಳು ಎನ್ನುತ್ತಾರೆ. ಇಂದಿನ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣವನ್ನು ಕೊಟ್ಟರೆ ಖಂಡಿತಾ ಅವರು ಮುಂದೆ ಉತ್ತಮ ಶಿಲ್ಪಿಗಳಾಗುತ್ತಾರೆ. ಆದರೆ ಇಂದಿನ ಶಿಕ್ಷಣ ಕೇವಲ ವಿಷಯ ಜ್ಞಾನವನ್ನು ತಲೆಗೆ ತುರುವುದಕಷ್ಟೇ ಸೀಮಿತವಾಗಿದೆ. ಶಿಕ್ಷಣ ಕ್ಷೇತ್ರಗಳು ಶಿಕ್ಷಣವ ಬಲಿಗೊಟ್ಟು ಕುಕ್ಷಿ ಕೇಂದ್ರಗಳಾಗುತ್ತಿವೆ. ರಕ್ಷಿಸುವವರಾರು? ರಾಷ್ಟ್ರ ಸುಭದ್ರವಾಗಿ ಉಳಿಯಲು ಭದ್ರವಾದ ಅಡಿಪಾಯ ಇರಬೇಕು, ಅಂತಹ ತಳಪಾಯವೇ ಯುವಶಕ್ತಿ. ವಿದ್ಯಾರ್ಥಿದೆಸೆಯಲ್ಲಿಯೇ ಇವರಿಗೆ ನ್ಯಾಯ, ನೀತಿ, ದಕ್ಷತೆ, ರಾಷ್ಟ್ರಪ್ರೇಮವನ್ನು ಮನವರಿಕೆ ಮಾಡಿಕೊಟ್ಟರೆ, ಇವರು ಮುಂದೆ ಮಾದರಿ ರಾಜಕಾರಣಿಗಳಾಗಿ, ಸುಭದ್ರ ಸರಕಾರ ಕಟ್ಟಬಹುದು. ಗಾಂಧೀ ತತ್ವದಂತೆ, ತತ್ವವಿಲ್ಲದ ರಾಜಕೀಯ ದುಡಿಮೆ, ಇಲ್ಲದ ಸಂಪತ್ತು, ನೀತಿಯಿಲ್ಲದ ವ್ಯಾಪಾರ. ಶೀಲವಿಲ್ಲದ ಶಿಕ್ಷಣ. ಆತ್ಮ ಸಾಕ್ಷಿ ಇಲ್ಲದ ಭೋಗ, ಮಾನವೀಯತೆ ಇಲ್ಲದ ವಿಜ್ಞಾನ; ತ್ಯಾಗವಿಲ್ಲದ ಜೀವನ ವ್ಯರ್ಥವಂತೆ. ಇಂದು, ಇವುಗಳು ನಮ್ಮ ಯುವ ಜನತೆಯ ನಿತ್ಯಗೋಳಾಗಿದೆ, ಈ ವಿಷವರ್ತುಲದಿಂದ ಯುವ ಜನತೆ ಹೊರ ಬರಬೇಕಾಗಿದೆ.

ಇಂದು ರಾಷ್ಟ್ರದ ಗಡಿ ರಕ್ಷಣೆ ಮಾಡುತ್ತಿರುವವರು ಯುವಕರೇ..... ಯುವಕರಾಗಿದ್ದವರೆ ಇತಿಹಾಸದಿಂದ ನಡೆದು ಬಂದಿರುವ ಯುದ್ಧದಲ್ಲಿ ತಾಯ್ನಾಡಿನ ರಕ್ಷಣೆಗಾಗಿ, ಶತ್ರುಗಳಿಗೆ ಬೆನ್ನು ತೋರಿಸದೇ, ಧೈರ್ಯದಿಂದ ಎದೆಯೊಡ್ಡಿದವರೂ ಯುವಕರೇ, ತಮ್ಮ ಸ್ವರ್ವಸ್ವವನ್ನು ತೊರೆದು ಹೋರಾಡಿದ ಹೋರಾಡುತ್ತಿರುವ, ಹೋರಾಡುವ ಮಂದಿಯೂ ಈ ಧೀರ ಯುವಕರೇ, ಇವರಿಂದ ರಾಷ್ಟ್ರ ನಿರ್ಮಾಣ ಅತ್ಯುತ್ತಮವಾಗಿ ನೆರವೇರುತ್ತದೆ. ಇವರ ಪಾತ್ರವನ್ನು ವರ್ಣಿಸಲು ಅಸಾಧ್ಯ.

ಅಲ್ಲದೇ ನಿರುದ್ಯೋಗಿ ಯುವಕರು ಸರಕಾರಿ ಕೆಲಸಕ್ಕೆ ಚಾತಕ ಪಕ್ಷಿಯಂತೆ ಹಂಬಲಿಸುತ್ತಾ ಕೂರದೆ, ಸ್ವಯಂ ಉದ್ಯೋಗವನ್ನು ಕೈಗೊಳ್ಳಬೇಕು. ಗ್ರಾಮಗಳ ಅಭಿವೃದ್ಧಿಗಾಗಿ ಶ್ರಮಿಸಬೇಕು. ಯುವ ಜನತೆ ಎಂಬ ದೀಪವು ದೇಶಭಕ್ತಿಯೆಂಬ ತೈಲದೊಡನೆ ಪ್ರಾಮಾಣಿಕತೆಯೆಂಬ ಬತ್ತಿಯೊಂದಿಗೆ ಮಿಳಿತವಾಗಿ ಪ್ರಜ್ವಲಿಸಿದರೆ... ಅಂದು ನಮ್ಮ ದೇಶ ರಾಮ ರಾಜ್ಯವಾಗಬಹುದು.

- ಲೇಖನ : ಮೂಡಗದ್ದೆ ಕೃಪಾ, ತಿತಿಮತಿ

ಅರೆಗನ್ನಡವು ನಡುಗನ್ನಡವೇ ಆಗಿದೆ. ಗುಣನ ತಿಳ್ದ್ - ಸ್ನೇಹಚಾರ್ ಮಾಡ್

# ಪಾಲೂರಿನಲ್ಲಿ ವಿಶ್ವ ಮಹಿಳಾ ದಿನಾಚರಣೆ

ಮಹಾ ಶಿವರಾತ್ರಿ ಮತ್ತು ವಿಶ್ವ ಮಹಿಳಾ ದಿನಾ ಚರಣೆ ಅಂಗವಾಗಿ ಪಾಲೂರು ಕಾಳಿಕಾಂಬ ಯುವತಿ ಮಂಡಳಿ ವತಿಯಿಂದ ಪಾಲೂರು ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಮಹಾ ಪೂಜೆಯನ್ನು ಇತ್ತೀಚೆಗೆ ಏರ್ಪಡಿಸಲಾಗಿತ್ತು. ಪಾಲೂರು ಗ್ರಾಮದ ಮಹಿಳೆಯರಲ್ಲದೆ, ಬೆಟ್ಟಗೇರಿ, ಕುಯ್ಯಂಗೇರಿ ಹಾಗೂ ಕೊಡಗು ಗೌಡ ಮಹಿಳಾ ಒಕ್ಕೂಟದ ಪದಾಧಿಕಾರಿಗಳು ಭಾಗವಹಿಸಿದ್ದರು. ಮಹಾಪೂಜೆಯ ನಂತರ ಬೈತಡ್ಕ ದೇವಮ್ಮ, ಚೇಯಂಡಿ ರಾಧ, ನೀರ್ಪಾಡಿ ನಾಗವೇಣಿ ಮತ್ತು ಶಿಕ್ಷಕಿಯರಾದ ಪುದಿನೆರವನ ರೇವತಿ, ಯವರು ದಿನದ ಮಹತ್ವವನ್ನು ಮಹಿಳೆ ಮತ್ತು ಮಹಿಳೆಯರ ಪಾತ್ರದ ಬಗ್ಗೆ ಮಾತನಾಡಿದರು. ನೆರವಂಡ ಗೊಂಬೆಯವರು ಸತ್ಸಂಗ ಪ್ರವಚನವನ್ನು ನೀಡಿ ಪ್ರತಿಯೊಬ್ಬನು ದೇವರನ್ನು ಪೂಜಿಸುತ್ತಾನೆ. ಆದರೆ ಈಶ್ವರನು ಪ್ರತಿಯೊಂದು ಜನಾಂಗಕ್ಕೂ ಕುಲದೇವರನ್ನು ಕೊಟ್ಟಿರುತ್ತಾರೆ. ಆದುದರಿಂದ ಯಾವುದೇ ಶುಭ ಸಮಾರಂಭಗಳಲ್ಲಿ ಅವರವರ ಜನಾಂಗದ ಕುಲದೇವರನ್ನು ಪ್ರಾರ್ಥಿಸಿ ನಂತರ ಕಾರ್ಯಕ್ರಮಗಳನ್ನು ಮಾಡಬೇಕೆಂದು ಮಹಿಳೆಯರಿಗೆ ತಿಳಿಯಪಡಿಸಿದರು. (ಉದಾ: ಕೊಡವರು ಕಾವೇರಿಯನ್ನು, ಗೌಡರು ವೆಂಕಟರಮಣ ಸ್ವಾಮಿಯನ್ನು ಹೀಗೆ) ನೀರ್ಪಾಡಿ ನಾಗವೇಣಿಯವರು ಗಣೇಶ, ಲಕ್ಷ್ಮಿ, ಸರಸ್ವತಿ, ಪಾರ್ವತಿ, ಶಿವ ಶ್ಲೋಕವನ್ನು "ಶುಕ್ಲಾಂಭರದರ" ದಿಂದ ಪ್ರಾರ್ಥಿಸಿದರೆ, ಬೈತಡ್ಕ ಜಾನಕಿಯವರು ತಾವೇ ರಚಿಸಿದ "ಪಾಲೂರಪ್ಪನಿಗೆ ಹದಿನೆಂಟು ಚೆಂಡೆ" ಎಂಬ ಪಲ್ಲವಿಯೊಂದಿಗೆ ಪಾಲೂರಪ್ಪ ಇಗ್ಗುತಪ್ಪ ಮಾದೂರಪ್ಪ ಪನ್ನಂಗಾಲ ತಮ್ಮೆಯರ ಹಾಡನ್ನು ಕಾಳಿಕಾಂಬೆ ಯುವತಿಮಂಡಲಿ ತಂಡದೊಂದಿಗೆ ಹಾಡಿ ನೆರೆದಿದ್ದವರನ್ನು ಪಾಲೂರಪ್ಪನ ಭಕ್ತಿಯಲ್ಲಿ ಮುಳುಗುವಂತೆ ಮಾಡಿದರು. ಪುದಿನೆರವನ ಆಶಾ ನೆರೆದವರನ್ನು ವಂದಿಸಿದರೆ, ಗೌಡ ಸಾಂಸ್ಕೃತಿಕ ಅಕಾಡೆಮಿಯ ಉಪಾಧ್ಯಕ್ಷೆ ನೈಯ್ಯಣಿ ಹೇಮಲತನವರು ಮಾತನಾಡಿ ಈಗಾಗಲೆ ಪಾಲೂರಿನ ಮಹಿಳೆಯರು 2 ಬಾರಿ ಸಂಘಟನೆ ಮಾಡಿ ಇಂತಹ ಕಾರ್ಯಕ್ರಮ ನಿರೂಪಿಸಿದಕ್ಕೆ ಮೆಚ್ಚುಗೆ ವ್ಯಕ್ತ ಪಡಿಸುವುದರೊಂದಿಗೆ ಮುಂದಿನ ಸಂಘಟನೆಯನ್ನು ಬೆಟ್ಟಗೇರಿ ಕೇಂದ್ರದಲ್ಲಿ ನಡೆಸುವುದೆಂದು ನಿರ್ಧರಿಸಿದರು.

ಇದೇ ರೀತಿ ಎಲ್ಲಾ ಊರುಗಳಲ್ಲಿ ನಮ್ಮ ಮಹಿಳೆಯರು ಮುಂದೆ ಬಂದರೆ ಜನಾಂಗ ಮುಂದುವರಿಯುದರಲ್ಲಿ ಯಾವ ಸಂಶಯವಿಲ್ಲ. ಪಾಲೂರಿನ ಮಹಿಳೆಯರು ಒಗ್ಗಟ್ಟು ಮತ್ತು ವಿಶ್ವಾಸವನ್ನು ಹೊಂದಿರುತ್ತಾರೆ. ಇವರಿಗೆ ಶ್ರೀ ಪಾಲೂರಪ್ಪ ಮತ್ತು ಕಾಳಿಕಾಂಬೆಯ ದಯೆಯಿರಲಿ ಎನ್ನುವುದು ಸಂಗಾತಿಯ ನಿಲುವು.

- ಸಂಗಾತಿ ,

# ಲೇಖನವೇ - ಲೇಸೆಂದು ತಿಳಿದಾಗ.

ಕೊಡಗು ಸಂಗಾತಿಗೆ 9-2-2002 ಕ್ಕೆ ಐದು ವರ್ಷಗಳು ತುಂಬಿ ಆರನೇ ವರ್ಷಕ್ಕೆ ಕಾಲಿರಿಸುವ ಹಿನ್ನಲೆಯಲ್ಲಿ ಸಂಗಾತಿಯು ಉಜ್ವಲವಾಗಿ ಪ್ರಕಾಶಿತವಾಗಿ ಎಲ್ಲೆಡೆ ತನ್ನ ಹೊಳಪನ್ನು ಹೊರ ಚೆಲ್ಲಲಿ ಎಂದು ನಾವೆಲ್ಲ ಶುಭ ಹಾರೈಸಬೇಕು. ಸಂಪಾದಕರು ತನ್ನ ಮನದ ಅಳಲನ್ನು, ಜನೋದ್ಧಾರಕ್ಕಾಗಿ ಶ್ರಮ ಪಟ್ಟು, ಮನಸ್ಸಿನ ಧ್ಯೇಯವನ್ನು ಕಾರ್ಯರೂಪಕ್ಕೆ ತಂದಿರುವುದು ಬಹಳ ಗಣನೀಯವಾದದು. ಈ ಹಿನ್ನಲೆಯಲ್ಲಿ ಅಲ್ಲೊಂದು ಇಲ್ಲೊಂದು ಸಿಗುವ ಪಾಕ್ಷಿಕ ಪತ್ರಿಕೆ ಸಾವಿರಾರು ಮನೆಗಳ ಬಾಗಿಲಿಗೆ ಬರುತ್ತವೆ. ಎಲ್ಲರೂ ನಮ್ಮವರು, ನಮ್ಮ ಜನಾಂಗದವರು ಎಂದು ಚಿಂತಿಸಿ, ಸರಕಾರದ ಅನುಮತಿ ಪಡೆದು "ಕೊಡಗು ಸಂಗಾತಿ" ಎಂಬ ನಾಮಕರಣದೊಂದಿಗೆ ಪಾಕ್ಷಿಕ ಪತ್ರಿಕೆಯ ಬಿಡುಗಡೆಗೆ ಸಂಪಾದಕರು ಪಾತ್ರರಾಗಿದ್ದಾರೆ. ಅದರಲ್ಲಿ ಆರ್ಥಿಕ ಮುಗ್ಗಟ್ಟಿನ ತೊಂದರೆಯಲ್ಲಿ ಮನಸ್ಸನ್ನು ವಿಚಲಿತಗೊಳಿಸದೆ ತನ್ನ ಗುರಿಯನ್ನು ಸಾಧಿಸಿದೆ.

ಅಲ್ಲದೆ ನಾಡಿನ ಸರ್ವರ ಸಹಕಾರವನ್ನು ಇಲ್ಲಿ ನಾವು ಮೆಚ್ಚಲೇ ಬೇಕು. ಈ ಪ್ರಾಕ್ಷಿಕ ಪತ್ರಿಕಾರಂಗ ಪ್ರವೇಶಿಸಿದಂತೆ ನಮ್ಮ ಜನಾಂಗದ ಕುಟುಂಬದಲ್ಲಿ ಒಂದಾಗಿ ಕ್ರಮೇಣ ಅದರೊಳಗೊಂಡಿರುವ ಸಂಸ್ಕೃತಿಗಳ ವಿವರ, ಕಥೆ, ಕವನ, ಅಭಿವೃದ್ಧಿ ಯಾಗಬೇಕಾದ ಸಲಹೆಗಳು ಅರೆಭಾಷೆಯ ನುಡಿಗಳು ಮತ್ತು ಕಥೆಗಳು ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಹೀಗೆ ದಿನೇ ದಿನೇ ಪ್ರಚಾರಕ್ಕೊಳಗಾಗಿ ಈ ಪತ್ರಿಕೆ ಹೆಚ್ಚಾಗಿ ಅಭಿವೃದ್ಧಿ ಹೊಂದಿ ಒಂದೊಂದು ಸಂಸಾರದಲ್ಲಿ ಒಂದಾಗಿ ಬೆಳೆಯಬೇಕು.

ಸಂಗಾತಿಯು ಗೌಡ ಜನಾಂಗದ ವಿವಾಹ ಸಮಾರಂಭ ತಿಥಿಕರ್ಮಾಂತರ, ಋತುಮತಿ ಸಂಪ್ರದಾಯಗಳು, ಮಗುವಿನ ನಾಮಕರಣ ಇವುಗಳ ವಿವರಣೆಯನ್ನು ಕಿರಿಯರು ಓದಿ ತಿಳಿದು ಕೊಳ್ಳುವಂತಾಯಿತು.

ಗೌಡ ಜನಾಂಗದವರು ಇಂತಹ ಪತ್ರಿಕೆಯಿಂದ ತಿಳಿಯ ಪಡೆದು ಹಳ್ಳಿಗಳಲ್ಲಿ ಗ್ರಾಮಗಳಲ್ಲಿ ಸಂಘಗಳು ರೂಪುಗೊಂಡು, ಸಂಘ ಸಂಸ್ಥೆ, ಸಮಾಜಗಳಾಗಿ ಮಾರ್ಪಾಟಾಗಿದೆ. ಇದರಿಂದ ಗೌಡ ಜನಾಂಗದಲ್ಲಿ ಸಾಕ್ಷರತೆ ಇಲ್ಲದ ಜನರು ಗ್ರಾಮದಲ್ಲಿ ಅಥವಾ ಗೌಡ ಜನಾಂಗದ ಮುಖಂಡತ್ವದಲ್ಲಿ ಸಲಹೆ ಪಡೆದು ಅವರಿಗೆ ಬೇಕಾದ ಸದೋಪಾಯಗಳನ್ನು ಸಂಘ ಅಥವಾ ಸಮಾಜಗಳ ಮೂಲಕ ಪಡೆಯುತ್ತಾರೆ. ವಿವಾಹ, ನಾಮಕರಣ ಲಗ್ನಪತ್ರಿಕೆ ಇವುಗಳಿಗೆ ಶಾಸ್ತ್ರಕೊತ್ತರವಾದ ಶೋಭಾನೆಯ ಪುಸ್ತಕಗಳನ್ನು ಕೂಡ ಬಿಡುಗಡೆ ಮಾಡಿವೆ. ಪೀಠೋಪಕರಣಗಳು ಮತ್ತು ಅಲಂಕೃತ ವಸ್ತುಗಳು ಮತ್ತು ಸಂಸ್ಕೃತಿಗೆ ಬೇಕಾಗುವ ಉಡುಪುಗಳು ಹೀಗೆ. ಇವುಗಳಲ್ಲಿ ಬೇಧವಿಲ್ಲ ಕೀಳರಿಮೆಯಿಲ್ಲ ಹೆಚ್ಚಾಗಿ ಬಡವರಿಗೆ ರಿಯಾಯಿತಿ ದರದಲ್ಲಿ ನೀಡಿ ಜನರಿಗೆ ಅನೇಕ ರೀತಿಯಲ್ಲಿ ಪ್ರಯೋಜನವಾಗುವಂತಹ ಕೊಡಗಿನ ಹಾಗೂ ಹೊರ ನಗರಗಳ ನಾನಾ ಕಡೆಗಳಲ್ಲಿ ಆಚರಣೆಗೆ ಬರುವಂತೆ ಸಂಘ, ಸಂಸ್ಥೆಗಳು ಕೆಲಸಗಳನ್ನು ಮಾಡಿವೆ.

---

ಕಲಿಯೊ ತನಕ ಬ್ರಹ್ಮ ವಿದ್ಯೆ - ಕಲಿತ ನಂತರ ಕೋತಿ ವಿದ್ಯೆ

ಗೌಡ ಜನಾಂಗದಲ್ಲಿ ಇತ್ತೀಚೆಗೆ ಎಲ್ಲರಲ್ಲಿಯೂ ಸಾಕ್ಷರತೆಯನ್ನು ಕಾಣ ಬಹುದಾಗಿದೆ. ಭಾರತದ ಪ್ರಜೆಗಳಲ್ಲಿ ನಾವು ಒಂದಾಗಿರ ಬೇಕಾದರೆ ಮೊದಲು ಸಾಕ್ಷರತೆ ಮುಖ್ಯ. ನಾವು ನೋಡಿ ತಿಳಿದುಕೊಳ್ಳುವುದಕ್ಕಿಂತ ಓದಿ ತಿಳಿದುಕೊಳ್ಳುವುದು ತುಂಬಾ ಅವಶ್ಯಕ, ಇನ್ನೊಬ್ಬರಿಂದ ತಿಳಿಯಪಡಿಸುವುದಕ್ಕಿಂತ ನಾವುಗಳೆ ತಿಳ್ದುಕೊಂಡರೆ ಅದು ನಮ್ಮ ವ್ಯಯಕ್ತಿಕ ಜೀವನಕ್ಕೆ ಹಾದಿಯನ್ನು ತೋರ್ಪಡಿಸಿದಂತಾಗುವುದು ಅಲ್ಲವೆ?

ಈಗ ಗೌಡ ಜನಾಂಗ ದಿನೇ ದಿನೇ ಸಂಘ, ಸಂಸ್ಥೆ ಸಮಾಜ ಸಾಕ್ಷರತೆ, ಸಂಸ್ಕೃತಿ ಇವುಗಳತ್ತ ಗಮನ ಹರಿಸಿದೆ. ಇವುಗಳ ಅಭಿವೃದ್ಧಿಗೆ ನಾನಾ ರೀತಿಯ ಯೋಜನೆಗಳನ್ನು ಹಮ್ಮಿ ಕೊಂಡಿದೆ. ವಿವಾಹಕ್ಕೆ ಅನುಕೂಲವಾಗಲೆಂದು ಸಮಾಜವು, ಸಾಕ್ಷರತೆಗೆ ಅನುಕೂಲವಾಗಲೆಂದು ಕಾವೇರಿ ನಾಡು, ಉದ್ಯೋಗಕ್ಕೆ ಅನುಕೂಲವಾಗಲೆಂದು "ಪುಣ್ಯ" ವೆಂಬ ಅನ್ವೇಷಣ ಕೇಂದ್ರ, ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಅಕಾಡೆಮಿಯೂ, ಮಹಿಳೆಯರ, ಅಭಿವೃದ್ಧಿಗಾಗಿ ಗೌಡ ಮಹಿಳಾ ಒಕ್ಕೂಟ ಹೀಗೆ ಅನೇಕ ರೀತಿಯಲ್ಲಿ ರೂಪುಗೊಂಡಿದೆ. ಈ ಎಲ್ಲ ವಿವರಣೆಯು ಕೊಡಗು ಸಂಗಾತಿ ಪತ್ರಿಕೆಯಿಂದ ಜನರಿಂದ ಜನರಿಗೆ ಪ್ರಚಾರವಾಗಿದೆ. ಸಲಹೆ ಪಡೆದು ಅಭಿವೃದ್ಧಿಗೊಂಡಿದೆ. ಇದರಲ್ಲಿ ಹೆಚ್ಚಿನಾಂಶ ಉತ್ತಮ ಗೌಡ ಸಮಾಜ ಅಂದರೆ ಬೆಂಗಳೂರಿನ ಕೊಡಗು ಮತ್ತು ದ. ಕ. ಜಿಲ್ಲೆ ಗೌಡ ಸಮಾಜ ಎಂದು ಹೇಳಬಹುದು.

ಹಿಂದೆ ನಮ್ಮ ಗೌಡ ಜನಾಂಗದವರು ತುಂಬಾ ಶ್ರಮ ಹಾಗೂ ಒಂದು ಸಮಾರಂಭವನ್ನು ಆಚರಿಸಲು ಒಂದು ತಿಂಗಳು ಶ್ರಮ ಪಡೆಯಬೇಕಾಗುತ್ತಿತ್ತು. ಅಂದರೆ, ಈ ಸಮಾರಂಭಕ್ಕೆ ಬೇಕಾದ ಸಲಕರಣೆಯನ್ನು ಒದಗಿಸಿಕೊಳ್ಳಲು ನಾನಾ ಕಡೆಯಿಂದ ತರಲು ಶ್ರಮ ಪಡೆಯುತ್ತಿದ್ದರು. ಹಿಂದೆ ಹಣಕ್ಕೆ ತುಂಬಾ ಪ್ರಾಮುಖ್ಯತೆ ಇತ್ತು. ಆದರೆ ಇಂದು ಗೌಡ ಜನಾಂಗದ "ಸಮಾಜ" ಎಂದು ರೂಪುಗೊಂಡು ಯಾವ, ಯಾವ ಸಮಾರಂಭಕ್ಕೆ ಬೇಕಾಗುವ ಸಲಕರಣೆಯ ವಸ್ತುಗಳನ್ನು ಪಡೆದುಕೊಳ್ಳಬಹುದು. ಮುಂದೆ ಏನಾಗಬಹುದು ಎಂಬ ಶಂಕೆಯನ್ನು ಊಹಿಸಲು ಅಸಾಧ್ಯ. ಕಾರಣ ಇದು ಈ ಕಂಪ್ಯೂಟರ್ ಯುಗವಾಗಿದೆ. ಮನುಷ್ಯನು ಹೆಚ್ಚು ಕಂಪ್ಯೂಟರನ್ನು ಅವಲಂಬಿಸಿದರೆ ಮನಸ್ಸಿನ ಕಾರ್ಯ ದಕ್ಷತೆ ಕುಂದುವ ಸಾಧ್ಯತೆ ಇದೆ. ಯುಗವು ನಿಮಿಷದಲ್ಲಿ ಓಡಬಹುದು. ತಮ್ಮ ಸಾಧನೆಯನ್ನು ನಿಮಿಷದಲ್ಲಿ ಸಾಧಿಸುವ ಎದೆಗಾರಿಕೆ ನಮ್ಮ ಜನಾಂಗದಲ್ಲಿ ಮೂಡಲಿ ಎಂದು ಹಾರೈಸೋಣ.

ಇತ್ತೀಚಿಗೆ ಗೌಡ ಜನಾಂಗದವರು ಭಾರತದ ಎಲ್ಲಾ ಕಡೆ ವ್ಯಾಪಿಸಿರುವರು. ಹೊರ ರಾಷ್ಟ್ರಗಳಲ್ಲಿ ನೆಲೆಸಿರುವ ಜನರು ಪ್ರಗತಿಕೋಸ್ಕರವಾಗಿ ಹೆಚ್ಚಿನ ವಿದ್ಯಾರ್ಜನೆಯ ಕಡೆಗೆ ಓಗೊಟ್ಟು ನಮ್ಮ ಸಂಸ್ಕೃತಿಯನ್ನು ಬಿಡದೆ ಹಬ್ಬ ಹರಿದಿನಗಳಲ್ಲಿ ಅವುಗಳನ್ನು ಅಲ್ಲಿಯೇ ಆಚರಿಸುವವರಿದ್ದಾರೆ. ವಿದೇಶಗಳಲ್ಲಿಯೂ ಗೌಡ ಜನಾಂಗದ ಸಂಸ್ಕೃತಿಯನ್ನು ಎತ್ತಿ ಹಿಡಿಯಲು ಶ್ರಮ ಪಡುತ್ತಿರುವರು. ಗೌಡ ಜನಾಂಗದವರು ಎಲ್ಲೇ ಇರಲಿ ಹೇಗೆ ಇರಲಿ, ಕೊಡಗು ಸಂಗಾತಿಗೆ ಸ್ಪಂದಿಸುವವರಾಗಿದ್ದಾರೆ.

ನಮ್ಮ ಜನಾಂಗದವರಿಗೆ ಒಂದು ಸೊಸೈಟಿ ಅವಶ್ಯಕವಾಗಿದೆ. ಈ ಯೋಜನೆಯಂತೂ ಮುಖ್ಯವಾಗಿ ಅಂದರೆ ರೈತರು ಹೆಚ್ಚಾಗಿ ವಾಣಿಜ್ಯ ಬೆಳೆಗಳನ್ನು ಅವಲಂಬಿಸಿರುವಾಗ, ಕಾಲ ಬದಲಾದಂತೆಲ್ಲಾ ವರ್ಷದ ಮೂರು ಋತುಗಳಲ್ಲಿ ಕೆಲವೊಂದು ಬದಲಾವಣೆಯಾದಂತಿದೆ. ಸರಿಯಾದ ಸಮಯಕ್ಕೆ ಮಳೆ ಸಿಕ್ಕದಿದ್ದಲ್ಲಿ ಬೆಳೆ ಬೆಳೆಯಲು, ಎಲ್ಲಾದರೂ ಒಂದು ಕಡೆ ಯಾವುದಾದರೊಂದು ರೀತಿಯಲ್ಲಿ ಹವಮಾನದ ಅಡಚಣೆಯಾಗುತ್ತದೆ. ಇದರಿಂದ ರೈತರು ಹಲವಾರು ರೀತಿಯಲ್ಲಿ ತೊಂದರೆಗೆ ಒಳಗಾಗುತ್ತಾರೆ. ಬೆಳೆಯುವ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆಗಳು ಸಿಕ್ಕುತ್ತಿಲ್ಲ. ಅದ್ದರಿಂದ ರೈತರಿಗೆ ಅನುಕೂಲವಾಗುವಂತ ಯೋಜನೆಯ ಸೊಸೈಟಿ ಅವಶ್ಯಕ. ಇದರಿಂದ ನಿಗದಿತ ಬೆಲೆಯನ್ನು ಪಡೆದುಕೊಳ್ಳಬಹುದು. ಸಾಲವನ್ನು ಪಡೆದು ಕಡಿಮೆ ಬಡ್ಡಿದರದಲ್ಲಿ ಸಾಲವನ್ನು ತೀರಿಸಲೂಬಹುದು.

ಬಡ ಜನರೊಂದಿಗೆ ಸ್ಪಂದಿಸಿ ಅವರಲ್ಲಿಯ ಕೀಳಿರಿಮೆ ಭಾವನೆಯನ್ನು ಹೋಗಲಾಡಿಸಲು ಮತ್ತು ಹೇಗೆ ಅನ್ಯಾಯವಾಗುತ್ತದೆ ಹಾಗೂ ಸಂಘ ಅಥವಾ ಸಮಾರಂಭಗಳಲ್ಲಿ ಜನಾಂಗದ ಹಿರಿಯರೊಡನೆ ಚರ್ಚಿಸಿ ಅವರಿಂದ ಸಿಗುವ ಪ್ರತಿಕ್ರಿಯೆ ಇವುಗಳ ಬಗ್ಗೆ ಮನವರಿಕೆ ಮಾಡಿಕೊಂಡರೂ ಉಪಯೋಗವಾಗಬಲ್ಲದು.

ಜನರನ್ನು ಹಣ ಮತ್ತು ರೂಪ ಹಾಗೂ ವಿದ್ಯೆಯನ್ನು ನೋಡಿ ಅಳೆಯುವುದಕ್ಕಿಂತ ಲೇಖನಿ ಹಿಡಿದು ಬರೆಯುವ "ಲೇಖನವೇ ಲೇಸೆಂದು" ನಾವೆಲ್ಲ ತಿಳಿದಾಗ ಸಾರ್ಥಕವಲ್ಲವೆ.

- ಬರಹ: ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ

## ಕಣ್ಣ್‌ಗಳ ಕಾಟ

ನೋಡಿಯಾ, ಕಣ್ಣ್‌ಗಳ್ದ ಮಾತಾಡಿಕೆ
ಬುಟ್ಟವೆ, ಹುಷಾರ್! ಎರೆಡ್‌ಸಲ ಅತ್ತ ಇತ್ತ
ನೋಡುವಷ್ಟರ್‌ಲಿ ಕ್ರಾಪ್, ಮೀಸೆ, ತೀಡಿ ಟ್ರಿಮ್ ಆದವೆ.
ಇರ್‌ವಷ್ಟರ್‌ಲೆ ಸ್ಮಾರ್ಟ್ ಆದವೆ. ಕಟ್ಟಿರ್‌ವ ವಾಚ್,
ಅದ್ ನಡೆಯದಿದ್ದರ್‌ಸ ಪರ್‍ವಾಗಿಲ್ಲೆ ಕಾಣಲಿತ ಹೇಳಿಕಂಡ್
ಆಗಾಗಕೆ ನೋಡಿಕೊಂಡವೆ ಇನ್ನೊಮ್ಮೆ ಅವ್ಳ ನೋಡಿ ಬುಟ್ಟರೆ
ಪರಿಚಯ ಇರುವಂಗೆ ಸಣ್ಣ ನಗೆ ಹುಬ್ಬು ಕೊಣ್ಸಿತ...
ಅಚ್ಚರಿಬ್ಯಾಡ ಇವು ಇರ್‌ದೇ ಹಿಂಗೆ, ತೆರೆದಿರ್‌ವ ಪುಸ್ತಕಲಿ,
ಗಮನ ಇಲ್ಲಿ ಇಟ್ಟ್ಸೆ ಅತ್ತ ಕಣ್ಣ್‌ಗಳಿಂದ ಸರ್ವೇ ಮಾಡುವೆ.
ತಿರ್‌ಗಿ ನೋಡದೆ ಹೊರ್‌ಡೊಕು ನೀನ್‌ನಿತ್ತರೆ, ನೆಗಾಡ್ತ್‌ರೆ,
ಬಿತ್ತ್‌ಗಾಳಕ್ಕೆ ಮೀನ್, ಅಲ್ವಾ? ಇರೊಕು ನೀನ್ ನಿತ್ಯ ಇಂಥವರೊಟ್ಟಿಗೆ
ಜಾರದೆ ಪಾರಾಕು,ಧೈರ್ಯದಿಂದ ಇರೋಕು ಮತ್ತೆ ನಾಳೆಗಂಟ
ಇದೆಲ್ಲದರ ಚಿಂತೆಗೆ ಮುಸುಕು ಎಳೆಯಕು........

- ಯಾಲದಾಳು: ಈ. ಚಂದ್ರಕಲಾ ಮಡಿಕೇರಿ

ಕೆಡುವ ಕಾಲಕ್ಕೆ ಬುದ್ಧಿ ಇಲ್ಲ - ಮರಣ ಕಾಲಕ್ಕೆ ಮದ್ದಿಲ್ಲ

2 ನೇ ಪುಟದಿಂದ

ಇವೆಲ್ಲ ದರರೊಂದಿಗೆ ಅಮರ ಸುಳ್ಯದಲ್ಲಿ ಪ್ರತಿಷ್ಠೆ, ತಕ್ಕಷ್ಟು ಸಿರಿವಂತಿಕೆಯುಳ್ಳ, ಕೆದಂಬಾಡಿ ರಾಮಗೌಡ ಮತ್ತೊಮ್ಮೆ ಎಲ್ಲರನ್ನೂ ಸೇರಿಸುವ ಮಹತ್ತರವಾದ ತೀರ್ಮಾನ ಕೈಗೊಳ್ಳುತ್ತಾನೆ ಆತ. ಕೂಜಿಗೋಡು ಅಪ್ಪಯ್ಯ ಗೌಡ, ಕಳಗಿ ಅಣ್ಣುಗೌಡ, ಶಿಷ್ಯನಾಗಿದ್ದ ಕಲ್ಯಾಣಸ್ವಾಮಿ ಎಂಬವನನ್ನು ಕೊಡಗಿನ ಶನಿವಾರ ಸಂತೆಯ ಸಮೀಪದ ಹೊಮ್ಮಿಗೆಯಲ್ಲಿ ಬೆಟ್ಟಿಯಾಗಿ ಕ್ರಾಂತಿಯ ಸಂಪೂರ್ಣ ಎಳೆ ಎಳೆಯನ್ನು ವಿವೇಚನೆಯಿಂದ ಹೆಣೆದು, ಕಲ್ಯಾಣ ಸ್ವಾಮಿಯೆಂಬ ಜಂಗಮ ಅಪ್ಪಾಜಿ, ಅರಸರ ದ್ವಿತೀಯ ಪುತ್ರ ನಂಜುಂಡ ಸ್ವಾಮಿ ಎಂಬುದಾಗಿ ಸುದ್ದಿಯನ್ನು ವ್ಯವಸ್ಥಿತವಾಗಿ ಹುಟ್ಟಿಸುತ್ತಾನೆ. ಮತ್ತೊಮ್ಮೆ ಕೊಡಗಿನಾದ್ಯಂತ (ಅಮರ ಸುಳ್ಯ ಸಹಿತ) ಹಾಲೇರಿ ಪರ ಅನುಕಂಪದ ಸ್ಪಂದನ ಏಳುವಂತೆ ವ್ಯವಸ್ಥೆ ಮಾಡುತ್ತಾನೆ. ಆದರೆ ಮಡಿಕೇರಿಯ ಹಾಗೂ ಸುತ್ತ ಮುತ್ತ ಅಷ್ಟೊಂದು ಬೆಂಬಲ ವ್ಯಕ್ತವಾಗುವುದಿಲ್ಲ. ಯಾಕೆಂದರೆ ಇವೆಲ್ಲ ಕೇವಲ ಗೌಡ ಸಂಘಟನೆಯೆಂಬ ತಾತ್ಸಾರವೂ ಕೊಡವರಲ್ಲಿ ಇದ್ದಿತ್ತು.

ಕಲ್ಯಾಣ ಸ್ವಾಮಿಯನ್ನು ಸುಳ್ಯದ ಪೂಮಾಲೆ ಕಾಡಿನಲ್ಲಿ ಗುಪ್ತವಾಗಿರಿಸಿದ ರಾಮಗೌಡ ಆಯುಧಗಳ ಜೋಡಣೆಯ ನಂತರ ತಾವು ತೀರ್ಮಾನಿಸಿದ ದಿನಗಳವರೆಗೆ ಕಾದರೆ ಗುಟ್ಟು ರಟ್ಟಾಗ ಬಹುದೆಂದು ಉದ್ದೇಶಿತ ದಿನಕ್ಕೆ ಏಳು ದಿನಗಳ ಮೊದಲೇ ಕ್ರಾಂತಿಯನ್ನು ಪ್ರಾರಂಭಿಸುತ್ತಾನೆ. ತನ್ನ ಮಗನ ವಿವಾಹವೆಂಬ ಸುದ್ದಿಯ ಸಾಂಕೇತಿಕ ದಿನ ಊರವರನ್ನೆಲ್ಲಾ ಸುಳ್ಯದ ಉಬರಡ್ಕದ ಕೆದಂಬಾಡಿಯಲ್ಲಿ ಸೇರುವಂತೆ ವ್ಯವಸ್ಥೆ ಮಾಡುತ್ತಾನೆ. ಆ ದಿನಗಳಲ್ಲಿ ಸುಳ್ಯದ ಪ್ರಮುಖವಾದ ಕೂಜಿಗೋಡು ಕಟ್ಟೆಮನೆ ಅಪ್ಪಯ್ಯಗೌಡ, ಉಳುವಾರು ರಾಮಯ್ಯಗೌಡ, ಕುಡುಕಲ್ಲು ಗೌಡಜ್ಜ, ಕುಡಕಲ್ಲು ತಿಮ್ಮಯ್ಯ, ಸುಳ್ಯಕ್ಕೋಡಿ ಕೃಷ್ಣಪ್ಪ, ಕಳಗಿ ಅಣ್ಣು, ಕುಂಚಡ್ಕ ಕೆಂಚಗೌಡ, ಕುಕ್ಕೆಟಿ ಚೆನ್ನ, ಚೊಕ್ಕಾಡಿ ಸೊಂತೋಡು ಬೊಮ್ಮಣ್ಣ ಮುಂತಾದ ಗೌಡ ಜನಾಂಗದವರು ಮಾತ್ರವಲ್ಲದೆ ಪೆರಾಜೆಯ ಬೀರಣ್ಣರೈ, ಮುರುಳ್ಯ ಈಶ್ವರ, ಸೋಮಾಯಾಜಿ, ಮುಂತಾದವರು ಈ ಹೋರಾಟದ ಮಂಚೂಣಿಯಲ್ಲಿದ್ದವರು.

ಈ ಹೋರಾಟಗಾರರು ಕೊನೆಗೊಮ್ಮೆ ಅಟ್ಲೂರು ರಾಮಪ್ಪಯ್ಯನನ್ನು ಕೊಂದು ಬೆಳ್ಳಾರೆ, ಪುತ್ತೂರು, ಬಂಟವಾಳದ ಮೂಲಕ ಮಂಗಳೂರಿಗೆ ಸಾಗಿ ಮಂಗಳೂರಿನಲ್ಲಿನ ಬ್ರಿಟಿಷ್ ಸೈನಿಕರನ್ನು ಸೋಲಿಸಿ ಹದಿಮೂರು ದಿನಗಳವರೆಗೆ ಮಂಗಳೂರನ್ನು ಆಳುತ್ತಾರೆ. ಇವನ್ನೆಲ್ಲಾ ಕೂಲಂಕುಷವಾಗಿ ಪರಿಶೀಲಿಸಿದರೆ, ಅಂದಿನ ಆ ದಿನಗಳಲ್ಲಿ ನಮ್ಮ ಹಿರಿಯ ಗೌಡರುಗಳ ಸಾಧನೆಯೇನೆಂಬುದು ಅರ್ಥವಾಗುತ್ತದೆ. ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯದ ವ್ಯಾಮೋಹದಿಂದ ಗಲ್ಲುಗಂಬವನ್ನೇರಿದ ಈ ದೇಶದ ಮೊದಲ ಹುತಾತ್ಮರು ಕೆದಂಬಾಡಿ ರಾಮಗೌಡ, ಗುಡ್ಡೆಮನೆ ಅಪ್ಪಯ್ಯಗೌಡರು.

ದುರ್ಗಮ ಗುಡ್ಡ ಬೆಟ್ಟಗಳ ನಡುವಿನ ಈ ಪುಟ್ಟ ಊರಿನ ಈ ವೀರರು ಈಗ್ಗೆ ಸುಮಾರು ನೂರ ಅರವತ್ತೈದು ವರ್ಷಗಳ ಹಿಂದೆಯೇ ಒಂದು ಗೆರಿಲ್ಲಾ ತರದ ಯುದ್ಧ ನಡೆದಿರುವುದನ್ನು ಕಂಡಾಗ ಅವರುಗಳ ಯೋಚನಾಮಟ್ಟ, ಸಂಘಟನಾ ಸಾಮರ್ಥ್ಯ ಎಷ್ಟೊಂದು ಮೇಲ್ಮಟ್ಟದಲ್ಲಿ ಇದ್ದಿತ್ತೆಂದು ಅರ್ಥವಾಗುತ್ತದೆ. ಈ ದಂಗೆಯನ್ನು ಮೊದಲೇ ಊಹಿಸಿದ್ದ ಕೂಜಿಗೋಡು ಅಪ್ಪಯ್ಯಗೌಡರು, ಕೆದಂಬಾಡಿ ರಾಮಗೌಡರು ಅಂದಿನ, ದಿನಗಳಲ್ಲಿಯೇ ಸಂಗ್ರಹಿಸಿ ಉಪಯೋಗಿಸಿದ ಆಯುಧಗಳನ್ನೂ ಇಂದು ನೋಡಿದಾಗ ಆಶ್ಚರ್ಯವಾಗುತ್ತದೆ. ಆ ಸಂಗ್ರಾಮದಲ್ಲಿ ಉಪಯೋಗಿಸಿದ ಕತ್ತಿಗಳು ಇಂದಿಗೂ ಕೆಲಮನೆಗಳಲ್ಲಿ ಕಾಣಸಿಗುತ್ತದೆ. ಕುಕ್ಕೆಟಿ ಮನೆಯಲ್ಲಿ ಸುಮಾರು 10 ಇಂಚು ಉದ್ದದ ಒಂದು ಪಿಸ್ತೂಲು ಮಾದರಿಯ ಗುಂಡು ಹಾರಿಸುವ ನಳಿಕೆಯು ಇದ್ದಿತಾದರೂ ಇಂದು ಅದು ಲಭ್ಯವಿಲ್ಲ. 'ಕಣ ಕ್ಕೂರು ಕೊಕ್ಕೆ' ಯೆನ್ನುವ ಒಂದು ವಿಶೇಶವಾದ ಕೋವಿಯನ್ನು ಉಪಯೋಗಿಸಿದ ಬಗ್ಗೆಯೂ ಮಾಹಿತಿ ಲಭ್ಯವಿದೆ. ಕಬ್ಬಿಣದ ಸಾಮಾಗ್ರಿಗಳನ್ನು ಹೆಚ್ಚಾಗಿ ತಯಾರಿಸುತ್ತಿದ್ದ ಕೊಡ್ಲಿ ಪೇಟೆಯ ಸಮಿಪ ಹುಲುಗುಂದ ಎಂಬಲ್ಲಿಂದ ರಾಮಗೌಡ ಉತ್ತಮ ಮಟ್ಟದ ಕಬ್ಬಿಣದಿಂದ ತಯಾರಿಸಿದ ಒಂದು ಸಾವಿರ ಕತ್ತಿಗಳನ್ನು ಮಾಡಿಸಿ ತರಿಸಿದ್ದನೆಂದೂ ಕೇಳಿಬರುತ್ತದೆ. ಪಟ್ಟಿ, ಕುದುರೆಪಾಯಿಗಳಲ್ಲಿ ಶತ್ರುಗಳು ಬರುವ ದಾರಿಯಲ್ಲಿ ಬಿದಿರಿನ ಕೊಳವೆಗಳನ್ನೂ ನೆಲದೊಳಗೆ ಹುಗಿದಿರಿಸಿ ಕುದುರೆಯ ಕಾಲುಗಳು ಅದರೊಳಗೆ ಸಿಕ್ಕಿ ಬೀಳುವಂತಹ ವ್ಯವಸ್ಥೆ ಕಡಿದಾದ ದಾರಿಯಲ್ಲಿ ಮೇಲಿನಿಂದ ಕಲ್ಲುಗಳನ್ನೂ ಉರುಳಿಸಿ ಶತ್ರುಗಳನ್ನು ನಾಶ ಮಾಡಿದ್ದು ಎಲ್ಲವೂ ಯುದ್ಧದಲ್ಲಿನ ನಮ್ಮ ಹಿರಿಯರ ಬುದ್ಧಿ ಮತ್ತೆಯನ್ನೂ ತೋರಿಸುತ್ತದೆ. ಈ ತೆರನ ಗೆರಿಲ್ಲಾ ಯುದ್ಧ ಭಾರತದಲ್ಲಿ ಎಲ್ಲೂ ನಡೆದಿಲ್ಲ.

ಒಟ್ಟಿನಲ್ಲಿ 'ಅಮರ ಸುಳ್ಯದ ಸ್ವಾತಂತ್ರ್ಯ ದಂಗೆ ಈ ದೇಶದ ಮೊಟ್ಟ, ಮೊದಲ ಬ್ರಿಟಿಶರೊಂದಿಗಿನ ಜನ ಸಂಘಟನೆಯ ಹೋರಾಟ. ಈ ಮಣ್ಣಿನ ನಮ್ಮ ಹಿರಿಯರೇ ಬ್ರಿಟಿಷರ ವಿರುದ್ಧ ನಮ್ಮ ದೇಶದ ಮೊದಲ ಹುತಾತ್ಮರು. ಅಂತಹ ಪುಣ್ಯಾತ್ಮಗಳನ್ನು ನಾವಿಂದು ಮರೆತಿರುವುದು ತುಂಬಾ ನೋವಿನ ವಿಷಯ. ಅವರುಗಳ ಬಗ್ಗೆ ಇನ್ನೂ ಹೆಚ್ಚಿನ ವಿಷಯ ಸಂಗ್ರಹಣೆ ಆಗಬೇಕಿದೆ. ಈ ನಿಟ್ಟಿನಲ್ಲಿ ನಮ್ಮ ಯುವ ಜನಾಂಗ ಮುಂದುವರಿಯುವುದು ಅಗತ್ಯ. ಈ ಜಲ, ಈ ನೆಲ, ಈ ಗಾಳಿಗಾಗಿ, ಅವುಗಳ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತ ಹಿರಿಯರನ್ನು ನೆನೆಯುದು ನಮ್ಮ ಆದ್ಯ ಕರ್ತವ್ಯವಾಗಿದೆ.

- ಕೆ. ಆರ್. ತೇಜುಕುಮಾರ್, ಬಡ್ಡಡ್ಕ

## ಅಡಿಕೆ ಬೆಳೆಯಲ್ಲೂ ತಾರತಮ್ಯ : ಸರಕಾರಕ್ಕೆ ತರಾಟೆ



ದ. ಕನ್ನಡ ಕನ್ನಡದಲ್ಲಿ ಬೆಳೆಯುವ ಅಡಿಕೆಯನ್ನು ವಾಣಿಜ್ಯ ಬೆಳೆಯೆಂದು ಪರಿಗಣಿಸಿರುವುದನ್ನು ಆಕ್ಷೇಪಿಸಿದ ಪ್ರತಿ ಪಕ್ಷದ ಉಪನಾಯಕ ಡಿ. ವಿ. ಸದಾನಂದಗೌಡ ಸರಕಾರವನ್ನು ವಿಧಾನಸಭೆಯಲ್ಲಿ ತರಾಟೆಗೆ ತೆಗೆದುಕೊಂಡರು. ಇತ್ತೀಚೆಗೆ ಶುಕ್ರವಾರ ಪ್ರಶ್ನೋತ್ತರ ಅವಧಿಯಲ್ಲಿ ಪ್ರತಿ ಪಕ್ಷದ ಉಪ ನಾಯಕ ಡಿ. ವಿ. ಸದಾನಂದ ಗೌಡ ದಕ್ಷಿಣ ಕನ್ನಡದ ಅಡಿಕೆಯನ್ನು ವಾಣಿಜ್ಯ ಬೆಳೆಯೆಂದು ಪರಿಗಣಿಸಲಾಗಿದೆ. ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಯ ಅಡಿಕೆಯನ್ನು ಆಹಾರ ಬೆಳೆಯಾಗಿ ಪರಿಗಣಿಸಲಾಗಿದೆ ಈ ತಾರತಮ್ಯವೇಕೆ? ಎಂದು ಪ್ರಶ್ನಿಸಿದರು.

ಈ ಕಾರಣಕ್ಕಾಗಿಯೇ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಳಸುವ ಪ್ರತಿ ಎಚ್‌ಪಿ ವಿದ್ಯುತ್‌ಗೆ 600 ರೂಪಾಯಿ ದರ ನಿಗದಿಪಡಿಸಿದೆ. ಇನ್ನಿತರೆ ಜಿಲ್ಲೆಗಳಿಗೆ ಕೇವಲ300 ರೂ. ನಿಗದಿ ಮಾಡಲಾಗಿದೆ. ಇದರಿಂದ ಅಡಿಕೆ ಬೆಳೆಗಾರರಿಗೆ ತೊಂದರೆಯಾಗಿದೆ. ಆದ್ದರಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ 300 ರೂ. ನಿಗದಿ ಪಡಿಸುವಂತೆ ಕೆಪಿಟಿಸಿ.ಎಲ್‌ಗೆ ನಿರ್ದೇಶನ ನೀಡಿ ಎಂದು ಅವರು ಪಟ್ಟು ಹಿಡಿದರು.

ಇದಕ್ಕೆ ಉತ್ತರಿಸಿದ ತೋಟಗಾರಿಕೆ ಸಚಿವ ರಾಜಾ ಅಮರೇಶ್ವರ ನಾಯಕ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬೆಳೆಯುವ ಅಡಿಕೆಯನ್ನು ನಿತ್ಯ ಆಹಾರವಾಗಿ ಸೇವಿಸುವುದಿಲ್ಲ. ಅದರ ಉತ್ಪನ್ನಗಳ ಮಾ ರಾಟಕ್ಕಾಗಿ ಬೆಳೆಯಲಾಗುತ್ತಿದೆ. ಆದ್ದರಿಂದ ಇದನ್ನು ವಾಣಿಜ್ಯ ಬೆಳೆಯಾಗಿ ಪರಿಗಣಿಸಲಾಗಿದೆ. ರಾಜ್ಯ ಕೃಷಿ ಬೆಲೆ ಆಯೋಗದ ಅಧ್ಯಕ್ಷ ಡಾ. ಬಿಸಲಯ್ಯ ವರದಿ ಬಂದ ನಂತರ ವರದಿಯಾಧರಿಸಿ ಬೆಲೆ ನಿಗದಿಪಡಿಸಲು ಪರಿಶೀಲಿಸಲಾಗುವುದು ಎಂದರು.

ಈ ವರದಿಯನ್ನು ನಿರ್ದಿಷ್ಟ, ಕಾಲ ಮಿತಿಯೊಳಗೆ ಅನುಷ್ಠಾನಕ್ಕೆ ತರುವಂತೆ ವಿಶ್ವೇಶ್ವರ ಹೆಗಡೆ ಕಾಗೇರಿ (ಬಿಜೆಪಿ) ಸಲಹೆ ಮಾಡಿದರು.

- ಸಂಗಾತಿ.

## ಅಮೃತೇಶ

ನೀನು ಯಾವ ಲೋಕದ ಮಾಯಾದೇವಿ?
ನೀನು ಎಲ್ಲವನ್ನೂ ತನ್ನೆಡೆಗೆ ಸೆಳೆಯುವ ಮಾಯೆಯೊ?
ಯುವ ಜನರೆಲ್ಲಾ ನಿನ್ನವರಾಗಿಹರು! ನೀನು
ಯಾವ ಲೋಕದ ಮಾಯಾದೇವಿಯೋ?
ಕೂಲಿ ಕಾರ್ಮಿಕರಂತೂ ನಿನ್ನ ಬಳಗದವರಾಗಿಹರು
ನಿನ್ನ ಭಕ್ತರೇನಕರು ಕೊರಳಿಗೆ ನೇಣಿ ಬಿಗಿದು ಕೊಂಡರು
ನಿನ್ನ ಭಕ್ತರ ಹೆಂಗಸು ಮಕ್ಕಳು ಕೂಳಿಲ್ಲದೆಬರಡಾಗಿಹರು
ನಿನ್ನ ಭಕ್ತರನು ಬಿಟ್ಟು, ದೂರ ಸರಿ ನಿನಗೆ ನಮೋ ನಮಃ
ಹೆಂಗಸರು ಮಾಂಗಲ್ಯ ಅಕ್ಕಿ ಭತ್ತ ಮಾರಿ ನಿನ್ನ ಒಲಿಸಿಕೊಂಡರು
ಶಾಲೆ ಬಿಡಿಸಿ ಮಕ್ಕಳನ್ನು ಕೂಲಿಗೆ ಅಟ್ಟಿದರು
ನೀನು ಯಾವಲೋಕದ ಮಾಯಾದೇವಿಯೋ?
ನೀನು ಎಲ್ಲರನ್ನೂ ತನ್ನೆಡೆಗೆ ಸೆಳೆಯುವ ಮಾಯೆಯೋ?
ನಿನ್ನ ಅಮಲಿನಿಂದ ಜಗಳವಾಡಿ ಒದೆತ ತಿಂದರು
ಕಂಗಾಲಾಗಿ ರೋಗಿಗಳಾದರು ಆಸ್ತಿ ಮಾರಿ ಸಾಲತೀರಿಸದೆ ಕೆಟ್ಟರು
ಗಂಗೆ ತುಂಗೆ ತೀರ್ಥಕ್ಕೂ ಮಿಗಿಲಾಯ್ತಲ್ಲಾ ನಿನ್ನ ಪಾನ್ಯ
ಇನ್ನಾದರೂ ಹೇಳು ನೀನು ಯಾವ ಲೋಕದ ಮಾಯೇದೇವಿಯೋ?
ಬ್ರಾಂಡಿ- ರಂ- ಬೀರು ಬಾರು ಅಂಗಡಿಗೆ ರಾಮಲಕ್ಷ್ಮಿ
ಗಣೇಶ ನಾಮವಿಟ್ಟು, ಪೂಜಿಸುವರು ನೀನು ಈ
ಲೋಕದಿಂದ ಮಾಯವಾಗಿ ಜನಕೋಟಿ ಉದ್ದರಿಸು
ಓ ಮಾಯಾದೇವಿ ನಿನಗೆ ನಮೋ ನಮಃ

- ಬಿ. ಎ. ಅಪ್ಪಣ್ಣ, ನಿವೃತ್ತ ಉಪಾಧ್ಯಾಯ

## ಆಸ್ಟ್ರೇಲಿಯಾದ ಸ್ಟಾಂಪ್‌ನಲ್ಲಿ ಕೊಡವ ದಂಪತಿ

ಆಸ್ಟ್ರೇಲಿಯಾದ ಸರಕಾರಿ ಅಂಚೆ ಸ್ಟಾಂಪ್‌ನಲ್ಲಿ ಕೊಡವ ದಂಪತಿಯ ಚಿತ್ರ ಮುದ್ರಿಸಲಾಗಿದೆ ಎನ್ನುವುದು ಆಶ್ಚರ್ಯ ಎನಿಸಿದರೂ ಸತ್ಯಾಂಶವಾಗಿದೆ.

ಆಸ್ಟ್ರೇಲಿಯಾದ 40 ಮತ್ತು 80 ಸೆಂಟ್‌ಗಳ ಸ್ಟಾಂಪ್‌ಗಳಲ್ಲಿ ಕೊಡಗಿನ ರಾಜೀವ್ ಗಣಪತಿ ಹಾಗೂ ವಿದ್ಯಾ ಕಾರ್ಯಪ್ಪ ಈ ದಂಪತಿಗಳ ಚಿತ್ರಗಳು ಮುದ್ರಿತಗೊಂಡಿವೆ. ರಾಜೀವ್‌ಗಣಪತಿ ಅ ವರು ಆಸ್ಟ್ರೇಲಿಯಾದ ಸಿಡ್ನಿಯಲ್ಲಿ 'ಆಲ್ ರಿಚ್ ನೋಯ್ಸ್ ಮೆಟಲ್ಸ್' ಸಂಸ್ಥೆಯಲ್ಲಿ ಫೇಬ್ರಿಕೇಶನ್ ಮೇನೇಜರ್ ಆಗಿ ಕಳೆದ13 ವರ್ಷಗಳಿಂದ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇತ್ತೀಚೆಗೆ ಈ ಕಂಪೆನಿಯು ಆಸ್ಟ್ರೇಲಿಯಾ ಸರಕಾರಕ್ಕೆ ಭಾರೀ ಮೊತ್ತದ ಉದಾರ ದಾನವನ್ನು ಹಣದ ರೂಪದಲ್ಲಿ ನೀಡಿತು ಇದಕ್ಕೆ ಪ್ರತಿಯಾಗಿ ಕೃತಜ್ಞತಾಪೂರ್ವಕವಾಗಿ ಆಸ್ಟ್ರೇಲಿಯಾ ಸರಕಾರ ಸ್ಟಾಂಪ್‌ನಲ್ಲಿ ಮುದ್ರಿಸಲು ಆ ಸಂಸ್ಥೆಗೆ ಬೇಕಾದವರ ಹೆಸರು ಬಯಸಿತು. ಆಲ್‌ರಿಚ್‌ಸಂಸ್ಥೆಯ ಮಾಲೀಕರು ರಾಜೀವ್ ಗಣಪತಿ ಅವರ ದಕ್ಷ ಸೇವೆಯನ್ನು ನೆನಪಿಸಿಕೊಂಡು ಅವರ ಮತ್ತು ಅವರ ಪತ್ನಿ ವಿದ್ಯಾರವರ ಚಿತ್ರವನ್ನು ಅಚ್ಚು ಮಾಡುವಂತೆ ಕೋರಿದರು. ಇದೀಗ 40 ಮತ್ತು80 ಸೆಂಟ್‌ಗಳ ಸ್ಟಾಂಪ್‌ಗಳಲ್ಲಿ ಕೊಡಗಿನ ಈ ಪತಿ ಪತ್ನಿಯರ ಭಾವಚಿತ್ರರಾರಾಜಿಸಿ ಆ ರಾಷ್ಟ್ರದಾದ್ಯಂತ ಪ್ರಚುರಗೊಂಡಿತು.

ರಾಜೀವ್‌ಗಣಪತಿ ಅವರು ವಿರಾಜಪೇಟೆಯ ವಕೀಲರಾದ ಮೊಣ್ಣಂಡ ಎ. ಗಣಪತಿ ಅವರ ಪುತ್ರರಾಗಿದ್ದಾರೆ. ಇವರು ಸಿಡ್ನಿಯಲ್ಲಿ ಕೊಡವ ಸಮಾಜದ ಸ್ಥಾಪಕಾಧ್ಯಕ್ಷರೂ ಹೌದು. ವಿದ್ಯಾ ಕಾರ್ಯಪ್ಪ ಅವರು ಬಾಳಾಜಿ ಗ್ರಾಮದ ಅಪ್ಪನೆರವಂಡ ಜಾಲಿ ಕಾರ್ಯಪ್ಪಮತ್ತು ಪತ್ನಿ ರಾಣಿ ಕಾರ್ಯಪ್ಪ ಇವರುಗಳ ಪುತ್ರಿಯಾಗಿದ್ದಾರೆ. ಇವರು ಸಿಡ್ನಿಯಲ್ಲಿ 'ಆಸ್ ಹಲ್ತ್ ಇಂಟರ್‌ನ್ಯಾಷನಲ್' ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಇತರ ದೇಶಗಳ ಸ್ಟಾಂಪ್‌ಗಳಲ್ಲಿ ಈ ಹಿಂದೆ ಜನರಲ್ ತಿಮ್ಮಯ್ಯನವರ ಭಾವ ಚಿತ್ರವನ್ನು ಸೈಪ್ರಸ್ ಸರ್ಕಾರ ಪ್ರಕಟಿಸಿದ್ದನ್ನು ಇಲ್ಲಿ ನೆನೆಯಬಹುದು. ಕೊಡಗಿಗದು ನಿಜವಾದ ಹೆಮ್ಮೆಯ ವಿಷಯ

- ಸಂಗಾತಿ

## ಪತ್ರ ವಿಭಾಗ

# ನಿಂದೇ ಗ್ಯಾನಲಿ.....

ಕಾವ್ಯ ನಿ ಹೆಂಗೊಳ್? ನಾನ್ ಕಲ್ಸಿದ ಅರೆಭಾಷೆ ನಿಂಗೆ ಮರ್ತ್ ಹೋಗ್ರ್‌ಕಿಲ್ಲೆತ್ತ್ ಗ್ಯಾನ ಮಾಡ್ಕಂಡ್ ಈ ಕಾಗದನ ಬರೀತಾ ಒಳೆ. ನೀನ್ ಚಿಕ್ಕಮಂಗಳೂರ್ಲಿ ಹುಟ್ಟಿ ಬೆಳ್ದರೂ ಸಹ ಅರೆಭಾಷೆನ ಮೇಲೆ ಅಭಿಮಾನ ಇಟ್ಟ್, ಅದರ್ನ ಕಲೀತಾ ಒಳೋಲಾ, ಅದಿಕ್ಕೆ ನಾನ್‌ನಿನ್ನ ಗೆಳತಿಯಾಗಿ ಹೆಮ್ಮೆ ಪಟ್ಟನೆ. ನೀನ್ ಪರೀಕ್ಷೆ ಹತ್ರ ಬಾತ್‌ತೇಳಿ ಲಾಯ್ಕಲಿ ಓದುತಾ ಇದ್ದಿ ಯಾತ ನಂಗೆ ಗೊತ್ತುಟ್ಟು. ಓದಿ ಓದಿ ಬೇಜಾರಾತ ಎಡೇಲಿ ನಾನ್ ಕಳ್ಸಿದ ಕೊಡಗು ಸಂಗಾತಿನ ಓದಿಕ. ನೀನ್ ನನ್ನ ಗೆಳತಿ ಆಕೆ ಈ ಸಂಗಾತಿನೇ ಕಾರಣಂತೇಳುದರ್ನ ಮರೀಬೇಡ. ನಾವ್ ಜೊತೇಲಿ ಹಾಸ್ಟೆಲ್‌ಲಿ ಇರ್ಕನ ನೀನ್ ನನ್ನ ರೂಮ್‌ಗೆ ಬಂದ್ ನಾನ್ ಓದ್ತಿದ್ದ ಸಂಗಾತಿನ ನೋಡಿ ಓದಿಕ್ಕೇತ್‌ತೇಳಿತಕ್ಕಂಡ್ ಹೋದ. ಆದರೆ ನಿಂಗೆ ಅರೆಭಾಷೆಲಿದ್ದ ಕಥೆಗ ಅರ್ಥ ಆತ್‌ಲ್ಲೆಂತಾ ವಾಪಾಸ್ ನನ್ನ ಹಕ್ಕಲ ಬಂದ್ ಓದ್ಸಿ ತಿಳ್ಕಂಡ. "ಇಷ್ಟ್ ಲಾಯ್ಕದ ಭಾಷೆ ಉಟ್ಟೊತ ನಂಗೆ ಇಂದ್‌ಗಂಟ ಗೊತ್ತಿತ್ಲೆತಾ" ನೀನ್ ಕನ್ನಡ ಅರೆಭಾಷೆನ ಸೇರ್ಸಿ ಹೇಳ್ಕ ನಂಗೆ ಆದ ಖುಷಿನ ಮಾತ್‌ಲಿ ಹೇಳಿಕಾದುಲ್ಲೆ. ಅದ್‌ಂದ್ ಕೊಡಗು ಸಂಗಾತಿ ಬಾಕನ ನನ್ನ ಕೈಯಿಂದ ಕಿತ್ತಿ ಕಂಡ್ ನಂಗಿಂತ ಮುಂದೆ ನೀನ್ ಓದ್ತಿದ್ದ ಪೆಂಗೋಡಿ ಮಲ್ಲೀ ಗೂಡೆ ಸುಂಟಿಕೊಪ್ಪದ ನಂಗೆ ನಮ್ಮ ಭಾಷೆಲಿ ಕಾಗದ ಬರಿಯುಕನ ಒಂದ್ ಅಕ್ಷರ ಗ ಸಹ ತಪ್ಪದಂಗೆ ರೂಮ್‌ನವ್ಕೆಲ್ಲಾ ಓದಿ ಹೇಳ್ತಿದ್ದ. ನಾನ್ ಸಚಿತನ ಹಕ್ಕಲೆ ಕನ್ನಡಲಿ ಮಾತಾಡ್ರೆ ಅರೆಗನ್ನಡಲಿ ಮಾತಾಡಿತ ಬಯ್ಯುತಿದ್ದ. ನಾವು ಉಜಿರೆಲಿರ್ಕನ ಕಳ್ದ ಆ ದಿನಗ ಮತ್ತೆ ಸಿಕ್ಕುದುಲ್ಲೆಂತಾ ನಂಗೆ ತುಂಬಾ ಬೇಜಾರಾಗ್ತ ಉಟ್ಟು. ಕೊಡ್‌ಗ್‌ಲಿ ಹುಟ್ಟಿ ಬೆಳ್ದವು ಅರೆಭಾಷೆನ ಮರಿಯತಿರ್ಕನ ನೀನ್ ಕೊಡ್‌ಗ್‌ನ ನೋಡ್ದೆ ಇದ್ರೂ ಅರೆಭಾಷೆನ ಕಲ್ತ್ ಈ ವೀರರ ನಾಡ್‌ಲಿ ಸುತ್ತಿಕೆ ಪರೀಕ್ಷೆ ಮುಗ್ದ ಮೇಲೆ ಮೇ ತಿಂಗಳ್ಲಿ ನಮ್ಮಲ್ಲಿಗೆ ಬಂದಿಯಾ? ಮೇ ತಿಂಗಲಿ ನಮ್ಮ ಮಹಿಳಾ ಒಕ್ಕೂಟದ್ ವಾರ್ಷಿಕೋತ್ಸ ಇದ್ದದೆ. ಅದಿಕ್ಕೆ ನೀನ್ ಬಂದ್ರೆ ನಮ್ಮ ಜನಾಂಗದ ಬಗ್ಗೆ ಹೆಚ್ಚಿಗೆ ವಿಷ್ಯ ತಿಳ್ಕಣಿಕೆ ಸಾಧ್ಯ ಆದು. ನಮ್ಮ ಸಂಗಾತೀಲಿ ಬರಿತ್ತಿದ್ದ ಜನಗ ಪೂರಾ ಅಲ್ಲಿ ಇದ್ದವೆ. ಮತ್ತೆ ಅದೇ ತಿಂಗ ಹೊಸೂರು, ನಿಡ್ಯಮಲೆ ಹಿಂಗೆ ಎಷ್ಟೋ ಕುಟುಂಬಲಿ ಮದುವೆಗ ಸನ ಉಟ್ಟು. ಅಲ್ಲಿ ನೀನ್ ಓದಿ ಕೇಳಿ, ತಿಳ್ಕಂಡ ಮದುವೆ ಪದ್ಧತಿಗಳ್ನ ನೋಡಿಕೆ ಸಾಧ್ಯ ಆದೆ. ನಿಂಗೆ ನಮ್ಮೂರಿಗೆ ಬಾಕೆ ಕಷ್ಟ ಆಕಿಲ್ಲೆ ಮಡಿಕೇರಿ ಬಸ್‌ಸ್ಟ್ಯಾಂಡ್‌ಲಿ ನಿತ್ತರೆ ರಾಮ ಬಸ್ಸು ಇಲ್ಲೆ ವಿಜಯ ಬಸ್ಸು ಸಿಕ್ಕಿದೆ. ಹಂಗೆ ಒಂದ್ ಸಂಗಾತಿನ ಮತ್ತೆ ವಾಕ್‌ಮನ್‌ಗೆ ಹಿಡ್ಕ. ಪೊನಿಧ್ವನಿ ಕ್ಯಾಸೆಟ್ ಕೇಳಿಕಂಡ್ ಸಂಗಾತಿ ಓದಿ ಮುಗ್ಸಿಕಾಕನ ಕರಿಕೆ ಗೇಟ್ ಹತ್ರ ಗೌಡ ಸಮಾಜ ಕಟ್ಟಡ ಲಾಯ್ಕಲಿ ಕಂಡದೆ ಆಗ ನೀನ್ ಇಳಿಯಕೆ ತಯಾರಿ ನಡ್ಸೊಕು ಮತ್ತೆ ಸೇತುವೆ ದಾಟಿದಂಗೆ ಪಾಣ್ತಲೆ. ಅಂಗ್‌ಡಿ ಇಲ್ಲೆ ಸೂರ್ತಲೆ ಅಂಗ್‌ಡಿ ಮುಂದೆ ಇಳ್ದ್ ನಾನ್ ಕೊಟ್ಟ ಅಡ್ರೆಸ್ ತೋರ್ಸಿರೆ ಸಾಕ್. ನಿಂಗಾಗಿ ಕಾಯ್ತಾ ಇದ್ದನೆ. ಇದರ ಓದಿದಂಗೆ ಹೊರ್ಟ್ ಬಾಕೆ ಮರಿಬೇಡ ಬಲಾ.

ನಿಂದೇ ಗ್ಯಾನಲಿರ್ವ

ನಿನ್ನ ಸಂಗಾತಿ

**ಕಾಂಚನ ಕುದುಕಳಿ, ಭಾಗಮಂಡಲ**

---

# ಪತ್ರಿಕೆ ವಿಭಾಗ

ಮಾನ್ಯರೇ,

ಕೊಡಗು ಸಂಗಾತಿ (ಮಾರ್ಚ್ ಸುಗ್ಗಿ) ಸಂಚಿಕೆಲಿ "ಗುಡ್ಡೆ ಮನೆ ರಮೇಶ್ ಮಡಿಕೇರಿ ಇವ್ರು "ಗೌಡ ಸಂಸ್ಕೃತಿ" ಭಾಷೆ ಮೊದ್ಲು" ತ ಬರ್ದ ಲೇಖನ ಓದಿ ತುಂಬಾ ಖುಷಿ ಆತ್. ಅರೆಗನ್ನಡ ಮಾತೃ ಭಾಷೆನವು ತಮ್ಮ ಭಾಷೆ ಮಾತಾಡಿಕೆ ನಾಚಿಕೆ ಪಡ್ದು ಯಾಕೇತ ಅರ್ಥ ಆದುಲೆ. ಸಂಪಾಜೆ ದಾಟಿದ ಮೇಲೆ ಗೌಡರಿಗೆ ಅರೆಗನ್ನಡ ಮಾತಾಡ್ದು ತೇಳ್ರೆ ಅದೊಂದು ಗತ್ತ್‌ನ ವಿಚಾರ. ಕೊಡಗ್‌ನವು ಮಾತ್ರ ನಾಚಿಕೆ ಪಟ್ಟವೆ! ಇಂತವರ ಕಟ್ಟಿಕಂಡ್ ಭಾಷೆ ಸಂಸ್ಕೃತಿ ಪೋಷಣೆಗೆ ಹೊರಟ್ರೇ ಗುರಿ ಮುಟ್ಟುದುಟ್ಟ? ಗುಡ್ಡೆ ಮನೆ ರಮೇಶ್ ಬರ್ದಂಗೆ ಮೊದ್ಲು ತಮ್ಮ ಭಾಷೆ ಮತ್ತೆ ಸಂಸ್ಕೃತಿ ಮೇಲೆ ಸ್ವಾಭಿಮಾನ ಹುಟ್ಸುವಂತ ಕಾರ್ಯ ಯೋಜನೆನ ಸಮಾಜವು ಮಾಡಕು.

ಒಂದು ಕಾಲಲಿ ಕೊಡವ ಭಾಷೆಗೆ ಬಂದಿದಷ್ಟ್ ದುರ್ಗತಿ ಅರೆಗನ್ನಡಕೆ ಎಂದೂ ಬಾತ್ಲೆ. ಇಂಗ್ಲೀಷ್ ಮಾತಾಡದಂವ ಕೊಡಗನೇ ಅಲ್ಲತ್ತೇಳುವಂತ ಪರಿಸ್ಥಿತಿ ಇತ್ತ್. ಆದರೆ ಕಳ್ದ 24 ವರ್ಷಗಳಲ್ಲಿ (1978 ರಿಂದ) ಅಂತ ಪರಿಸ್ಥಿತಿನೇ ಮೂಲೆಗಂಡ್‌ಸಿ ಇಂದ್ ಕೊಡವ ಭಾಷೆ ಮತ್ತು ಸಾಹಿತ್ಯಕ್ಕೆ ಪುನರ್ಜನ್ಮ ಬಂದಂಗಾವುಟು.

ಅರೆಗನ್ನಡ ಮಾತೃಭಾಷೆನವು ಆ ಭಾಷೆಲಿರುವ ಇಂಪು, ಕಂಪುನ ಅರ್ಥ ಮಾಡಿ ಕಣಕು. ಆಡುಭಾಷೆ ಗಳ ಪೈಕಿ ತುಂಬ ಅರ್ಥಪೂರ್ಣ ಮತ್ತೆ ಪೊರ್ಲುನ ಭಾಷೆ ಇದ್. ಈ ಭಾಷೆ ಮತ್ತೆ ಸಾಹಿತ್ಯ ಖಂಡಿತಾ ಬೆಳೆಯಕು ಅರೆ ಭಾಷೆ ಕಲ್ಸಿಬುಟ್ರೆ ಮಕ್ಕಳಿಗೆ ಕನ್ನಡಲಿ ಸಾಹಿತ್ಯ ಬಾದುಲೆ ಗಡ ಕೊಳಂಬೆ ಪುಟ್ಟಣ್ಣ ಗೌಡ್ರು, ಕೋಡಿ, ಕುಶಾಲಪ್ಪ ಗೌಡ್ರ್, ಇಂತ ನೂರಾರ್ ವಿದ್ವಾಸಂರೆಲ್ಲ ಅರೆಭಾಷೆಲಿ ಉಸಿರಾಡ್ದವುತ ಜನ ತಿಳಿಯಕು.

-ಬಾಚರಣೆಯಂಡ ಅಪ್ಪಣ್ಣ, ಅಧ್ಯಕ್ಷರು,
ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ.

---

ಜಾಣನಿಗೆ ಮಾತಿನ ಪೆಟ್ಟು - ಕೋಣನಿಗೆ ಲತ್ತೆ ಪೆಟ್ಟು

ಪ್ರಿಯ ಸಂಪಾದಕರೇ,

ಗೌಡ ಜನಾಂಗದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ನಮಗೆ ನನ್ನ ಅಭಿನಂದನೆಗಳು, ಗೌಡ ಜನಾಂಗದ ಏಕೈಕ ಪತ್ರಿಕೆಯಾದ ಕೊಡಗು ಸಂಗಾತಿಯ ಉಳಿವಿಗಾಗಿ ಹೋರಾಡುತ್ತಿರುವ ನಿಮಗೆ ನಮ್ಮ ಕೃತಜ್ಞತೆಗಳು. ಈಗಾಗಲೇ ನೀವುಗಳು ಪತ್ರಿಕೆಯಲ್ಲಿ ಹಲವಾರು ಬಾರಿ ತಮ್ಮ ಕಷ್ಟಗಳನ್ನು ತೋಡಿಕೊಂಡಿರುವಿರಿ. ನೀವು ಕೇವಲ ಸಂಗಾತಿಯಲ್ಲಿ ಕೊಡಗಿನ ಗೌಡ ಜನಾಂಗದ ಪರಿಚಯವನ್ನು ಮಾತ್ರ ಮಾಡುತ್ತಿದ್ದೀರಿ. ನಾನು ದ. ಕನ್ನಡದವನಾದರೂ ಈ ಪತ್ರಿಕೆಯನ್ನು ಕಳೆದೆರಡು ವರ್ಷಗಳಿಂದ ಓದುತ್ತಿರುವೆನು. ನೀವು ಚಂದಾದಾರರಾಗಿ ಪಡುತ್ತಿರುವ ಕಷ್ಟ ನಮಗೆ ಅರ್ಥವಾಗುತ್ತದೆ. ಆದರೆ ನೀವು ದಕ್ಷಿಣ ಕನ್ನಡ ಗೌಡ ಜನಾಂಗವನ್ನು ಪೂರ್ಣವಾಗಿ ನಿರ್ಲಕ್ಷಿಸಿದ್ದೀರಿ. ಮುಂದಿನ ಪತ್ರಿಕೆಯಲ್ಲಿ ಈ ಜಿಲ್ಲೆಯ ಪರಿಚಯ ಮಾಡುವುದರ ಮೂಲಕ ದಕ್ಷಿಣ ಕನ್ನಡ ಗೌಡ ಜನಾಂಗದ ಚಂದದಾರಿಕೆಯನ್ನು ಹೆಚ್ಚಿಸಿಕೊಂಡು ಪ್ರತಿಯನ್ನು ಉಳಿಸುವ ಪ್ರಯತ್ನವನ್ನು ಮಾಡಬಹುದು. ಪತ್ರಿಕೆಯಲ್ಲಿ ಅಭಿಪ್ರಾಯ ತಿಳಿಸಿ.

- ಬಿ. ಜಯಂತ ಸುಳ್ಯ.

ವಿ. ಸೂ: ವಂದನೆಗಳು, ನೀವು ತಿಳಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಯ ವಿವರ ಪತ್ರಿಕೆಯಲ್ಲಿ ಇರುವುದು ಕಮ್ಮಿಯೇ ಸರಿ. ಆದರೆ ನಾವುಗಳು ಅಥವಾ ನಮ್ಮ ಪ್ರತಿನಿಧಿಗಳನ್ನು ಎಲ್ಲ ಕಡೆಗಳಿಗೂ ಕಳುಹಿಸಲು ನಿರೀಕ್ಷೆಯಂತೆ ಆಗುತ್ತಿಲ್ಲ. ನಮ್ಮಲ್ಲಿಯ ಕೆಲವು ಪರಿಚಯಸ್ಥ ಬರಹಗಾರರಿಗೆ ವಿನಂತಿದ್ದೇನೆ. ವಿಷಯ ಸಿಕ್ಕಿದ ತಕ್ಷಣ ಹಾಕುತ್ತಲಿದ್ದೇವೆ. ಮಾರ್ಚ್ ಸಂಚಿಕೆಯಲ್ಲಿ ಶಾಸಕ ಸದಾನಂದ ಗೌಡರ ಬಗ್ಗೆ ಲೇಖನಿ ನೀಡಿದ್ದೇವು. ಹಾಗೇಯೇ ನೀವು ಪ್ರೋತ್ಸಾಹಿಸಿ ಬರವಣಿಗೆ ಕಳುಹಿಸಿ ಖಂಡಿತ ನಾವ್ ಪ್ರಕಟಿಸುತ್ತೇವೆ. ನಿಮ್ಮೆಲ್ಲರ ಸಹಕಾರ ಓದುವುದಕ್ಕೂ ಮಾತ್ರವಲ್ಲ ಬರೆಯುವುದಕ್ಕೂ ಇರಲೆಂದು ನಾವು ಆಶಿಸುತ್ತೇವೆ. ಹಾಗೂ ಇನ್ನು ಮುಂದೆ ಚಂದದಾರರಾಗಿ ಸಹಕರಿಸುವಂತೆ ವಿನಂತಿ.

-ಸಂಪಾದಕ.

ಮಾನ್ಯ ಸಂಪಾದಕರಿಗೆ,

ತಮ್ಮ "ಕೊಡಗು ಸಂಗಾತಿ" ಪಾಕ್ಷಿಕ ಓದುಗಾರಲೊಬ್ಬರಾಗಿ ಮುಖ್ಯವಾದ ನಾನು ಈ ಮೂಲಕ ತಿಳಿಯಪಡಿಸುವುದೆನೆಂದರೆ ಹಿಂದೆ ನೀವು ತಿಂಗಳಿಗೆ ಎರಡು ಕಂತಿನಲ್ಲಿ ಸಂಗಾತಿಯನ್ನು ಪ್ರಕಟಿಸುತ್ತಿದ್ದೀರಿ. ಈಗ ನೀವೆ ಹೇಳಿಕೊಂಡ ಕಾರಣದಿಂದಾಗಿ ತಿಂಗಳಿಗೆ 1 ಆವೃತಿಯನ್ನು ಬಿಡುಗಡೆ ಮಾಡುತ್ತಿದ್ದೀರಿ. ಆದರೆ ಹಿಂದೆ ಒಂದು ಆವೃತಿಯ ಬೆಲೆ ರೂ. 6-25 ಇದ್ದರೆ ಈಗ ಅದೆ ಮಾದರಿಯ ಅಷ್ಟೆ ಪುಟಗಳನ್ನು ಒಳಗೊಂಡ ಆವೃತಿಗೆ ರೂ 12-50 ರಂತೆ ಪ್ರಕಟ ಮಾಡಿ ವಸೂಲು ಮಾಡುವುದು ನಿಜವಾಗಿ ಕೊಂಡು ಓದುವವರಿಗೆ ತುಂಬಾ ದುಬಾರಿಯಾಗಿ ಕಾಣುವುದಲ್ಲದೆ ಮುಂದೆ ಕೊಳ್ಳಬೇಕಾ ಅಥವಾ ಬೇಡವ ಎಂಬ ಜಿಜ್ಞಾಸೆಯನ್ನು ಮೂಡಿಸುತ್ತದೆ. ದಯವಿಟ್ಟು ಆವತ್ತಿಯ ಬೆಲೆಯನ್ನು 6 ರೂಗೆ ಇಳಿಸಿದರೆ ಕೊಂಡು ಓದುವವರ ಸಂಖ್ಯೆಯು ಹೆಚ್ಚಬಹುದೆಂದು ನನ್ನ ನಂಬಿಕೆ.

- ಇತಿ, ಹೆಸರಿಲ್ಲ.

ವಿ. ಸೂ:

ಸಂಗಾತಿಯ ಬಿಡಿ ಪ್ರತಿಗಳನ್ನು ನಾವು ಎಲ್ಲರಿಗೂ ಯಾರಿಗೂ ಕಳುಹಿಸುತ್ತಿಲ್ಲ ನೀವು ತಿಳಿಸಿದಂತೆ, ಸಂಗಾತಿಯನ್ನು ಓದುವವರ ಸಂಖ್ಯೆ ದಿನೆ ದಿನೇ ಹೆಚ್ಚುತ್ತಿದ್ದ ರೂ ಸಹ ಹಣ ತೆತ್ತು ಕೊಂಡು ಓದುವವರ ಸಂಖ್ಯೆ ದಿನೇ ದಿನೇ ಇಳಿಮುಖವಾಗುತ್ತಿದೆ. ನವೀಕರಣವನ್ನು ಸಹ ನಿಯಮಿತವಾಗಿ ಆಗುತ್ತಿಲ್ಲ ಅನಿವಾರ್ಯವಾಗಿ ಎಲ್ಲವನ್ನೂ ಪತ್ರಿಕೆಯಲ್ಲೂ ತಿಳಿಸಲು ಸಾಧ್ಯವಿಲ್ಲ. ಒಬ್ಬ ಸದಸ್ಯ ಚೆಕ್ಕಿನ ಮೂಲಕ ರೂ ಕಳ್ಳಿದರೆ, ಬ್ಯಾಂಕ್ ಕಮಿಷನ್ ಇತ್ಯಾದಿಯಾಗಿ 25 ರಿಂದ 35 ರೂ ಪಾಯಿ ತೆರಬೇಕಾಗುತ್ತದೆ. ಟೆಲಿಫೋನ್ ಬಿಲ್ಲೆ, ಸಂಬಳ, ಪೇಪರ್, ಪೋಸ್ಟೇಜ್, ಸ್ಟಾಂಪ್ ಪ್ರಿಟಿಂಗ್ ಚಾರ್ಜು ಕಛೇರಿಯ ಬಾಡಿಗೆ ಪೆಟ್ರೋಲ್ ಖರ್ಚು ಭತ್ಯಗಳು, ಏಜೆಂಟರ ಕಮಿಷನ್ ಸ್ಟೇಷನರಿ, ಕಥೆಗಳಿಗೆ ಸಂಭಾವನೆ, ಫೋಟೋ ಖರ್ಚು ಇತ್ಯಾದಿ ಇತ್ಯಾದಿ ಇನ್ನು ಹಲವಾರು ತರದ ಖರ್ಚುವೆಚ್ಚಗಳು ತಗಲುತ್ತವೆ. ಪತ್ರಿಕೆ ಲಾಭದಾಯಕವಾಗಿ ನಡೆಯಿಸಲು 3,000 ಪತ್ರಿಕೆಯ ಚಂದವು ಆಗಿದ್ದಾಗ್ಗೆ ನವ ಈಕರಣತ್ತಿರಲೇಬೇಕು. ಈಗಿರುವ ಮೂರು ಸಂಖ್ಯೆಲ್ಲಿ ಪತ್ರಿಕೆಯು ನವೀಕರಣವಾಗುತ್ತಿದ್ದರೆ, ಖಂಡಿತ ಯಾರಿಂದಲೂ ನಡೆಯಿಸಲು ಸಾಧ್ಯವಿಲ್ಲವೆಂಬ ಮಾತನ್ನು ಇಲ್ಲಿ ಹೇಳಲೇ ಬೇಕಾಗುತ್ತದೆ. ಹಾಗೆಯೇ ಸಮಾಜ ವಿದ್ಯಾಸಂಘ ಇವುಗಳ ಸಹಕಾರವನ್ನೂ ಪತ್ರಿಕೆ ನಡೆಯಿಸಲು ಕೇಳಿಕೊಂಡಾಗ ಸಿಕ್ಕಿದ ಉತ್ತರ ನಕರಾತ್ಮಕವಾಗಿದೆ. ಈಗಿನ ಪರಿಸ್ಥಿತಿಯಲ್ಲಿ ಪತ್ರಿಕೆಯನ್ನೂ ಉಳಿಸಿಕೊಳ್ಳುವುದು ನಮ್ಮ ನಿಮ್ಮೆಲ್ಲರ ಕ್ಷಿಪ್ರ ಕಾರ್ಯಸೂಚಿಯಾಗಿರಬೇಕು.

ಸುಧಾ, ತರಂಗ, ಮಂಗಳ ಪತ್ರಿಕೆಯಂತೆ ಸಂಗಾತಿಯು ಲಕ್ಷಾಂತರ ಮಾರಾಟವಾಗುತ್ತಿದ್ದರೆ, ನಾವು ಸಹ ಖಂಡಿತವಾಗಿ ಅವುಗಳಂತೆ ಕಡಿಮೆ ಬೆಲೆಗೆ ನೀಡುತ್ತೇವೆ, ಅನ್ನುವ ಭರವಸೆಯನ್ನು ನೀಡುತ್ತೇನೆ.

-ಸಂಪಾದಕ.

## ಪತ್ರ ವಿಭಾಗ :

ಮಾರ್ಚ್ ತಿಂಗಳ ಸಂಚಿಕೆ ಉತ್ತಮವಾಗಿ ಮೂಡಿ ಬಂದಿದೆ. ಪ್ರಭಾಕರ ಅಂಕಲ್ ಬರೆದಿರುವ "ಬರೆಯಿರಿ ಸಂಗಾತಿಗೆ" ತುಂಬಾ ಚೆನ್ನಾಗಿದೆ.

ಮಾರ್ಚ್ 8ರಂದು **'WOMANS DAY'** ಈ ದಿನಕ್ಕೆ ಪೂರಕವಾಗಿ ಮೂಡಿಬಂದಿರುವ "ಮಹಿಳೆ ಮತ್ತು ಅವಳ ಸಮಸ್ಯೆಗಳು" ಎಂಬ ಬರಹ ಚೆನ್ನಾಗಿದೆ. ಬರಹಗಾರ್ತಿ ಮೀನಾಕ್ಷಿ, ಕೆ.ಎಂ. ರವರಿಗೆ ವಂದನೆಗಳು. ಹೀಗೆ ಆಯಾಯತಿಂಗಳಿಗೆ ಪ್ರಶಸ್ತವಾಗುವಂತೆ ನಾನಾ ಆಚರಣೆ, ಹಬ್ಬ ಹರಿದಿನಗಳ ಬಗ್ಗೆ ತಿಳಿಹೇಳುವಂತ ಬರಹಗಳಿಗೆ ಪ್ರೋತ್ಸಾಹವಿರಲಿ.

- ಎಡಿಕೇರಿ ಸುದರ್ಶನ್, ಬೆಂಗಳೂರು.

# ಇಂದಿನ ಸಮಾಜದಲ್ಲಿ ಯುವ ಜನರ ಯುವ ಜನತ್ವ

ದೇಶದ ಭವಿಷ್ಯವನ್ನು ಕಾಪಾಡುವವರು ಯುವ ಜನಾಂಗದವರು ಎಂದು ಹೇಳುತ್ತೇವೆ. ಯುವ ಜನಾಂಗವೆಂದರೇನು? ಉತ್ಸಾಹ ಪೂರ್ಣಿತ ಶಕ್ತಿ ರಕ್ತಗಳ, ಬುದ್ಧಿ ತುಂಬಿದ ಸಮಾಜಕ್ಕೆ ತಮ್ಮನ್ನು ಅರ್ಪಿಸುವ ಉತ್ಸಾಹವಿರುವ ಒಂದು ಪವಿತ್ರ ಜನ ಸಮೂಹ. ಯುವ ಜನಾಂಗವೆಂದರೆ ಸಣ್ಣ ವಯಸ್ಸಿನವರೂ ಅಲ್ಲ, ವಧ್ದಾಪ್ಯದವರೂ ಅಲ್ಲ ಸುಮಾರು 15 ವರ್ಷದಿಂದ 40 ವರ್ಷದವರೆಗೆ ಇರುವವರನ್ನು ಯುವ ಜನಾಂಗದವರು ಎಂದು ಹೇಳುತ್ತೇವೆ.

ಒಟ್ಟಿನಲ್ಲಿ ಯುವ ಜನಾಂಗವೆಂದರೆ ಸಮಾಜದ ಅಂಗವಾಗಿ ಸಮಾಜದಿಂದ ಸಮಾಜಕ್ಕಾಗಿ ದುಡಿಯುವ ಉತ್ಸಾಹಿ ತರುಣರು.

ಯುವ ಜನರ ಬೆಳವಣಿಗೆ ಧ್ಯೇಯೋದ್ದೇಶ ಬೆಳವಣಿಗೆ ಎಂದರೆ ಬೆಳೆಯುವುದು. ಜೀವ ವಿರುವ ಎಲ್ಲಾ ಜೀವಿಗಳಿಗೂ ಇರುವುದು ಬೆಳವಣಿಗೆ ವಯಸ್ಸಿಗೆ ತಕ್ಕಂತಿರಬೇಕು. ಸಾಧಾರಣ ಜನಾಂಗದ ಬೆಳವಣಿಗೆ ತಾಯಿಯ ಮೊಲೆ ಹಾಲಿನಿಂದ ಶುರುವಾಗುತ್ತದೆ. ಒಳ್ಳೆ ಬೆಳವಣಿಗೆ, ಒಳ್ಳೆ ಆಹಾರ ಒಳ್ಳೆಯ ವಾತಾವರಣ, ಪ್ರೀತಿ ವಾತ್ಸಲ್ಯದ ಪರಿಸರ ಬೆಳವಣಿಗೆಯನ್ನು ಬೆಳೆಸಿ ಪೋಷಿಸುತ್ತದೆ. ಬೆಳವಣಿಗೆ ಹೇಗಿರಬೇಕು? ಯುವ ಜನಾಂಗದಲ್ಲಿ ಜ್ಞಾನ ಅಂದರೆ ಬುದ್ಧಿ ಮುಖ್ಯವಾಗಿ ಬೆಳೆಯಬೇಕು. ಯಾವುದು ಬೇಕು ಯಾವುದು ಬೇಡ, ಎನ್ನುವುದರ ಪರಿವೆಯಿರಬೇಕು. ತನಗೆ ಯಾವುದು ಹಿತ ತನ್ನಿಂದ ಯಾವುದು ಸಮಾಜಕ್ಕೆ ಏನು ಹಿತ, ಸಮಾಜದಿಂದ ನನಗೆ ಏನು ಹಿತ ಎಂಬ ಹಿತ ಅಹಿತಗಳ ಧೃಡ ನಿರ್ಧಾರದ ಅರಿವು ಮುಖ್ಯ. ವ್ಯಕ್ತಿ ಸಮಾಜವಲ್ಲ ಸಮಾಜ ವ್ಯಕ್ತಿಯಲ್ಲ, ಆದರೆ, ವ್ಯಕ್ತಿಯಲ್ಲಿ ವ್ಯಕ್ತಿತ್ವ, ಸಮಾಜದಲ್ಲಿ ಸಾಮೂಹಿಕ ವ್ಯಕ್ತಿತ್ವ ಇರಲೇಬೇಕು. ಇದು ವೈಜ್ಞಾನಿಕ ಬೆಳವಣಿಗೆ ಯಿಂದ ಮಾತ್ರ ಸಾಧ್ಯ. ವೈಜ್ಞಾನಿಕ ಬೆಳವಣಿಗೆ ಎಂದರೆ ವಿಚಾರ ಪರ ಬೆಳವಣಿಗೆ ವಿಚಾರವೆಂದರೇನು? ತನ್ನ ಚಿಂತನೆ, ಸಮಾ ಜ ಚಿಂತನೆ ಹಾಗೂ ದೇಶ ಚಿಂತನೆ, ಇದಕ್ಕೆ ಅಡಿಪಾಯ ತಾಯಿಯ ಮೇಲಿನ ಪ್ರೀತಿ ಭಕ್ತಿ, ಭಾವ. ತಾಯಿ ಭಾಷೆಯ ಮೇಲೆ ಪ್ರೀತಿ ಅದರ ಅಭ್ಯಾಸ, ಉಪಯೋಗ, ಮಹತ್ವ, ತಾಯಿಯ ಮೇಲಿನ ಪ್ರೀತಿ ಪ್ರೇಮ ಕೃತಜ್ಞತೆ ಭಕ್ತಿ ಪೂಜ್ಯ ಭಾವ ಅಳವಡಿಸಿಕೊಂಡರೆ ತಾಯಿ, ಭಾಷೆಯಲ್ಲಿ ಅನುರಾಗ ಬರುತ್ತದೆ. ಇವೆರಡು ಗುಣಗಳನ್ನು ಅಳವಡಿಸಿ ಕೊಂಡರೆ ತಾಯಿನಾಡಿನ ದೇಶದ ಹಿತ ಚಿಂತನೆ ತಾನಾಗಿಯೇ ಉದ್ಭವವಾಗುತ್ತದೆ. ಯುವ ಜನರು ತಮ್ಮ ಬೆಳವಣಿಗೆಯಲ್ಲಿ ಯು ಮೊಟ್ಟ, ಮೊದಲಿನ ಪಾಠ ಜನ್ಮದಾತೆ ತಾಯಿಯನ್ನು ಪ್ರೀತಿಸುವುದು ಮತ್ತು ರಕ್ಷಿಸುವುದು. ತಾಯಿ ಭಾಷೆಯನ್ನು ಆಡುವುದು ಆಡಿಸುವುದು ಮತ್ತು ಪೋಷಿಸುವುದು. ಹಾಗೆಯೇ ನಮ್ಮನ್ನು ಹೊತ್ತ ಭೂಮಿ ಸಂರಕ್ಷಿಸುವ ಭೂಮಿ ಜೀವನಕ್ಕೆ ಉಸಿರಾಡಲು ಸಿಕ್ಕಿದ ಗಾಳಿ ಇವೆಲ್ಲಾ ನಿರ್ಮಲ ವಾತಾವರಣ ಇದರ ರಕ್ಷಣೆ ಪೋಷಣೆ ಇದೆಲ್ಲಾ ಯುವ ಜನಾಂಗದ ಬೆಳವಣಿಗೆಯ ಪ್ರಥಮ ಬೆಳವಣಿಗೆ, ಕಲಿಕೆಯಲ್ಲಿ ಪ್ರಕೃತಿಯೇ ನಮಗೆ ಗುರು. ಜನಾಂಗವೇ ವಿದ್ಯಾರ್ಥಿ ಅಥವಾ ಜಿಜ್ಞಾಸಿ. ನಮಗೆ ಪವಿತ್ರವಾದ ಧರ್ಮನಿಷ್ಟೆ ಅರ್ಥ ಅರ್ಪಣೆ ನಮ್ಮ ಹೆಸರಿನ ರಕ್ಷಣೆ, ನಮ್ಮ ಪ್ರಕೃತಿಯ ಲಕ್ಷಣ ರಕ್ಷಣೆ. ಯುವ ಜನರ ಕಾರ್ಯವ್ಯಾಪ್ತಿ.

ಇದಕ್ಕೆ ನಾವು ನಮ್ಮನ್ನು ತಯಾರಿಕೆಯಲ್ಲಿ ಟ್ಟುಕೊಳ್ಳಬೇಕು. ಅದೇ ನಿರ್ಧಾರ ಶಾಲಾ ಕಾಲೇಜು, ವ್ಯಾಸಂಗ ಜ್ಞಾನದ ಒಂದು ಹನಿ, ಚೆನ್ನಾಗಿ ಮಾಹಿತಿ ಸಂಗ್ರಹ ಜ್ಞಾನವನ್ನು ಗ್ರಹಿಸುವುದು ಉತ್ತಮ. ಆದರೆ ಕಲಿತ ಜ್ಞಾನವನ್ನು ಸಾರ್ವಜನಿಕರ ಹಿತಕ್ಕಾಗಿ ಬಳಸುವುದು ಇನ್ನೂ ಉತ್ತಮ. ಇದಕ್ಕೆ ಸಹಪಾಠ ಅತ್ಯುತ್ತಮ. ವಿದ್ಯೆ ಎಂದರೆ ಅದೊಂದು ಸೌಂದರ್ಯ, ಗುಪ್ತಧನ, ದೇಹಾಭಿಮಾನದಿಂದ ದೇಶಾಭಿಮಾನಕ್ಕೆ ಕೊಂಡೊಯ್ಯುವ ಸುಖ ವಾಹನ. ವಿದ್ಯೆ ಮಕ್ಕಳ ಮನಸ್ಸಿನಲ್ಲಿ ಆತ್ಮಾಭಿಮಾನ, ಧೈರ್ಯ ಸತ್ಯ ಭಕ್ತಿ ಬೆಳಗಿಸುವ ಆಶಾದೀಪ, ಇದು ಬೆಳಗಬೇಕಾದರೆ ಭಗವಂತನ ಮೇಲೆ ಪ್ರೇಮ ಬೆಳಗಬೇಕು. ಸಹ ವಿದ್ಯೆ ಎಂದರೇನು? ದೇಹ ಸಂರಕ್ಷಣೆಗೆ ಕೊಡುವ ಆದ್ಯತೆ ಮೆದುಳಿನಲ್ಲಿ ಬುದ್ಧಿ ಇರಬೇಕು. ಶರೀರದಲ್ಲಿ ದೃಢತೆ ಆರೋಗ್ಯ ವಿರಬೇಕು. ಆರೋಗ್ಯಕ್ಕೆ ಮುಖ್ಯ ಅವಶ್ಯಕತೆ. ಮೈದಾನದಲ್ಲಿ ಕೂಡಿ ಆಡುವ ಆಟ, ಅದು ಕುಸ್ತಿಯೆ ಆಗಲಿ, ಕ್ರಿಕೆಟ್ ಆಟವೇ ಆಗಲಿ, ಕಬಡ್ಡಿಯೇ ಆಗಲೀ ಲಗ್ಗೆ ಚಿಣ್ಣೆ ಕೋಲಾಟವೇ ಆಗಲಿ ಮೈದಾನದಲ್ಲಿ ಕೂಡಿ ಆಡುವುದು ಕ್ಲಾಸಿನಲ್ಲಿ ಓದುವುದಕ್ಕಿಂತ ಹೆಚ್ಚು ಮಹತ್ವ ಉಳ್ಳದ್ದು. ಮೊದಲನೆ ಪಾಠ ಶಿಸ್ತು. ಶಿಸ್ತು ಇಲ್ಲದವನಿಗೆ ಯಾವಾಗಲೂ ಸುಸ್ತು. ಸುಸ್ತು ದೇಹಕ್ಕೆ ಹಾನಿ. ಮೈದಾನದಲ್ಲಿ ಇತರರೊಂದಿಗೆ ಕೂಡಿ ಆಡುವುದರಿಂದ ನಮಗೆ ದೊರೆಯುವುದೇನು? ಅದರಿಂದ ಕಲಿಯಬೇಕಾದ ಪಾಠ ಯಾವುದು? ಮೊದಲ ಪಾಠ ವಿಶ್ವಾಸ. ವಿಶ್ವಾಸ ಯಾರಲ್ಲಿ ? ತನ್ನಲ್ಲಿ ಆಡುವ ಮೈದಾನದಲ್ಲಿ, ಆಡುತ್ತಿರುವ ಸಂಗಡಿಗರಲ್ಲಿ.3) ಧೈರ್ಯ ಎಂತಾ ಕಷ್ಟ, ಪರಿಸ್ಥಿತಿಯನ್ನು ಸಮಯೋಚಿತವಾಗಿ ಎದುರಿಸುವ ಸಾಮರ್ಥ್ಯ 3) ಬುದ್ಧಿ, ಸಂದರ್ಭಗಳನ್ನು ತೂಗಿ ಅದಕ್ಕೆ ಪರಿಹಾರ ಕೊಡುವ ಸಾಮಾನ್ಯ ಜ್ಞಾನ. 4) ಶಕ್ತಿ ಎದುರಾಳಿಯನ್ನು ಮೀರಿಸುವ ಸ್ವಶಕ್ತಿ 5) ಪರಾಕ್ರಮ ತನಗೆ ಎದುರಾಳಿಯನ್ನು ನಿಯಂತ್ರಿಸುವ ಸಾಮರ್ಥ್ಯ. ಇವುಗಳನ್ನು ನಮಗೆ ಅರಿವಿಲ್ಲದೆ ಕಲಿಯಬಹುದು. ಒಟ್ಟಾರ್ಥ ವಿಶ್ವಾಸ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ ಮತ್ತು ಪರಾಕ್ರಮ. ಯುವ ಜನಾಂಗಕ್ಕೆ ಈ 5 ಗುಣಗಳು ಮ ಐದಾನದ ಆಟದಿಂದ ಬರುವ ಪವಿತ್ರ ಗುಣಗಳು. ಇವು ತಮ್ಮಲ್ಲಿ ಕರಗತವಾದರೆ ತನ್ನಲ್ಲಿ ಆತ್ಮ ವಿಶ್ವಾಸ ತಾನಾಗಿಯೇ ಬೆಳೆಯುತ್ತದೆ. ಇದನ್ನು ಪಡೆಯಬೇಕಾದರೆ ಶರೀರವನ್ನು ಶುದ್ಧವಾಗಿಟ್ಟು ಕೊಳ್ಳಬೇಕು. ಶುದ್ಧವೆಂದರೆ ಮಾನಸಿಕ ಶುದ್ಧತೆ, ಪಂಚೇಂದ್ರಿಯಗಳ ಶುಪದ್ಧತೆ, ಶರೀರದ ಭಾಹ್ಯ ಶುದ್ಧತೆ, ಪ್ರೇಮದಲ್ಲಿ ಶುದ್ಧತೆ, ಮುಂದಿನ ಧ್ಯೇಯ ಪರಿ ಪಕ್ವವಾಗಿರ ಬೇಕಾದರೆ ಹಿಂದಿನ ಆಚರಣೆ ಮುಖ್ಯ. ಹಾಗಾಗಿ ಯುವ ಜನಾಂಗದ ಬೆಳವಣಿಗೆಗೆ ಧೂಮಪಾನ ಸೇವನೆ

ಸಮಾಜದ ಕೆಲಸಕ್ಕಾಗಿ ಮುಂದೆ ನುಗ್ಗಿದಾಗ ಕೈ ಕಾಲು ಎಳೆಯುವ ಪ್ರವೃತ್ತಿ ಸಲ್ಲ.

ಡ್ರಗ್ಸ್ ಮಾದಕ ದ್ರವ್ಯ ಸೇವನೆ, ಬ್ರಹ್ಮಚರ್ಯೆ ನಿರ್ಲಕ್ಷತೆ ಇದನ್ನು ಖಡ್ಡಾಯವಾಗಿ ನಿಷೇಧಿಸಬೇಕು. ಇದಕ್ಕೆ ಯಾರ ಪ್ರೇರಣೆಯೂ ಬೇಡ. ಸ್ವಯಂ ಪ್ರೇರಣೆ ಪರೀಕ್ಷೆಯಲ್ಲಿ ಒಳ್ಳೆ ಫಲಿತಾಂಶ ಬರಬೇಕಾದರೆ ಶ್ರಮವನ್ನು ಓದಿನಲ್ಲಿ ಅಳವಡಿಸಿಕೊಳ್ಳಬೇಕು. ಯುವ ಜನಾಂಗಕ್ಕೆ ಒಳ್ಳೆ ಬೆಳವಣಿಗೆ ಬೇಕಾದರೆ ಒಳ್ಳೆಯದಲ್ಲದ್ದನ್ನು ತ್ಯಜಿಸಬೇಕು. ಬ್ರಹ್ಮಚರ್ಯೆ ರಕ್ಷಣೆ ಅತಿ ಮುಖ್ಯ.

**ಮುಂದಿನ ಜೀವನಕ್ಕೆ ತಯಾರಿ:-** ಜೀವನದಲ್ಲಿ ಸಾಮಾನ್ಯವಾಗಿ 3 ವೈವಿದ್ಯಾತೆಗಳಿವೆ. ಬಾಲ್ಯ. ಯೌವ್ವನ, ವೃದ್ಧಾಪ್ಯ. ಜೀವನದ ತಯಾರಿಯಲ್ಲಿ ಬಾಲ್ಯ, ಬಹುಮುಖ್ಯ. ಜೀವನದ ಅಡಿಪಾಯ ಬಾಲ್ಯ. ಇದು ನಮ್ಮ ಜೀವನಕ್ಕೆ ಭದ್ರತೆ. ಬಾಲ್ಯವನ್ನು ಸಂತಸದಿಂದ ತುಂಬಿಕೊಂಡಿರಬೇಕು. ಇಲ್ಲಿ ತನ್ನನ್ನು ತಾನು ಪ್ರೀತಿಸಿಕೊಳ್ಳಬೇಕು. ಸಂಸಾರದ ಮೇಲೆ ಪ್ರೀತಿ, ಇವು ಮುಖ್ಯ. ಯೌವ್ವನ ಇದೊಂದು ಅಂಕೆಯಿಲ್ಲದ ಪರಿಸ್ಥಿತಿ. ಯೌವ್ವನವನ್ನು ನಮ್ಮ ಜೀವನದ ಸೊತ್ತಾಗಿರಿಸಿಕೊಳ್ಳಬೇಕು. ಜ್ಞಾನ ವರ್ಧನೆ ಪರಿಸರ ಪ್ರೇಮ ಗಳಿಕೆಯ ಪ್ರೇಮ, ಸಂಸಾರ ಪ್ರೇಮ ಬಂಧು ಬಾಂಧವರಲ್ಲಿ ಸೌಹಾರ್ದತೆ, ಮಕ್ಕಳಲ್ಲಿ ವಾತ್ಸಲ್ಯ ಇವುಗಳು ಮುಖ್ಯ. ಕಟ್ಟಡಕ್ಕೆ ಅಡಿಪಾಯ ಮುಖ್ಯ. ಬಾಳಿಗೆ ಬಾಲ್ಯ ಮುಖ್ಯ ಬಾಲ್ಯದಿಂದ ಯೌವ್ವನ ಅಡಿಪಾಯವಿಲ್ಲದ ಗೋಡೆ ನಿರ್ಮಾಣ ಯೌವ್ವನ ಬಾಲ್ಯದಲ್ಲಿ ಕಲಿತ ಸುಭೋಧನೆಯ ಜ್ಞಾನದಿಂದ ಯೌವ್ವನವನ್ನು ನಿರ್ಮಿಸಬೇಕು. ಬಾಲ್ಯ ಯೌವ್ವನ, ಸರಿಯಾದರೆ ವೃದ್ಧಾಪ್ಯವೇ ಸುಗಮ. ಆದ್ದರಿಂದ ಮುಂದಿನ ಜೀವನ ತಯಾರಿಯಲ್ಲಿ ಯೌವನದಲ್ಲಿ ದುಡಿಮೆ ಮುಖ್ಯ. ಯುವ ಜನರೆಂದರೆ ಲಿಂಗಭೇದ ಇರಕೂಡದು. ಎಲ್ಲರೂ ಸಮಾಜಕ್ಕಾಗಿ ದೇಶಕ್ಕಾಗಿ ದುಡಿಯಬೇಕು. ಸ್ತ್ರೀಯರಿಗೆ ಇಲ್ಲಿ ಪುರುಷರಿಗಿಂತ ಹೆಚ್ಚಿನ ಜವಾಬ್ದಾರಿ ಇದೆ. ಅದಕ್ಕನುಗುಣವಾಗಿ ಅವರ ದೇಹ ರಚನೆಯೂ ಪ್ರಕೃತಿದತ್ತವಾಗಿದೆ. ದೈಹಿಕ ಕಾರ್ಯದಲ್ಲಿ ಬುದ್ಧಿಯಲ್ಲಿ ಪುರುಷರ ಸಮವಿರಬಹುದು. ಅಥವಾ ಅವರನ್ನು ಮೀರಿಸಬಹುದು. ಇದನ್ನು ಎಲ್ಲರೂ ಇಷ್ಟಪಡುತ್ತಾರೆ. ಆದರೆ ಸರಿ ಸಮಾನತೆ, ಮೀಸಲಾತಿ ಏನೇ ಇರಲಿ ಬಿಡಲಿ, ಮುಂದಿನ ಪೀಳಿಗೆಯ ನಿರ್ಮಾಣ ಹೆಣ್ಣು ಮಕ್ಕಳ ಕೈಯಲ್ಲಿದೆ. ತಮ್ಮ ಜೀವನದಲ್ಲಿ ಮುಂದಿನ ಜೀವನ ತಯಾರಿಯಲ್ಲಿ ಹೆಣ್ಣು ಮಕ್ಕಳ ಪಾತ್ರ ಘನವಾದ ಶ್ರೇಷ್ಟವಾದ ಪವಿತ್ರವಾದ ಕೆಲಸವೆಂದರೆ ಮುಂದಿನ ಪೀಳಿಗೆಗಾಗಿ ಹಿಂದಿನವರ ನೆನಪಿಗಾಗಿ ಇಂದಿನವರ ಒಲವಿಗಾಗಿ ಒಂದೆರಡು ಮಕ್ಕಳನ್ನು ಹೊತ್ತು ಹೆತ್ತು, ಅವರನ್ನು ಮುದ್ದಿನಿಂದ ಶಿಸ್ತಿನಿಂದ ಸಾಕಿ ತಮ್ಮ ಕೀರ್ತಿಗೂ ಸಮಾಜದ ಕೀರ್ತಿಗೂ ದೇಶದ ಕೀರ್ತಿಗಾಗಿ ದೇಶಕ್ಕೆ ಶಿಸ್ತಿನ ಮಕ್ಕಳನ್ನು ಅರ್ಪಿಸುವ ಕರ್ತವ್ಯ ಹೆಣ್ಣು ಮಕ್ಕಳಲ್ಲಿದೆ. ಇದಕ್ಕಿಂತ ಪವಿತ್ರವಾದ ಧರ್ಮನಿರತವಾದ ಕರ್ತವ್ಯ ಬೇರೊಂದಿಲ್ಲ.

ಈ ಪವಿತ್ರಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಳ್ಳಬೇಕು. ನೌಕರಿ, ಐಶ್ವರ್ಯ ಐಶಾರಾಮಗಳು ಏನೇ ಇದ್ದರೂ ಎಷ್ಟೇ ಇದ್ದರೂ ದೇಶದ ಏಳ್ಗೆಗಾಗಿ ಒಂದೆರಡು ಮಕ್ಕಳನ್ನು ಸಮಾಜಕ್ಕೆ ಅರ್ಪಿಸದಿದ್ದರೆ, ಹೆಣ್ಣು ಜನ್ಮಕ್ಕೆ ಅಪವಾದ. ಇದಕ್ಕಾಗಿ ತಮ್ಮನ್ನು ತಾವು ತಯಾರಿ ಮಾಡಿಕೊಳ್ಳಬೇಕು. ಹೇಗೆ ತನ್ನ ದೇಹವನ್ನು ಪವಿತ್ರವಾಗಿಟ್ಟುಕೊಳ್ಳುವುದು. ಯೌವ್ವನದ ಹುಚ್ಚಾಟದಲ್ಲಿ ತನ್ನಲ್ಲಿರುವ ತನ್ನತನ ಹೆಣ್ಣುತನ ಮಾತೃತನವನ್ನು ನಾಶ ಪಡಿಸಿಕೊಳ್ಳಕೂಡದು ಯೌವ್ವನದಲ್ಲಿ ಹೆಣ್ಣುತನವನ್ನು ಕಳೆದುಕೊಂಡರೆ ಹೆಣ್ಣು ತನ್ನನ್ನು ತಾನು ಕಳೆದುಕೊಂಡಂತೆ ಹೆಣ್ಣು ಮಕ್ಕಳು ಯೌವನವನ್ನು ಮಾತೃತನದಿಂದ ಪಾವನಗೊಳಿಸಿಕೊಳ್ಳಬೇಕು. ಇದೇ ಸ್ತ್ರೀಧರ್ಮ ಯೌವ್ವನದಲ್ಲಿರಬೇಕಾದ ನಿರ್ಧಾರ.

**ತನ್ನನ್ನು ತಾನು ರಕ್ಷಿಸಿಕೊಳ್ಳುವುದು.-** ಇದೊಂದು ಆತ್ಮಾಭಿಮಾನದ ವಿಷಯ ತನ್ನನ್ನು ತಾನು ಉದ್ಧರಿಸಿಕೊಳ್ಳುವುದು ಆತ್ಮೋದ್ಧಾರ, ಲೋಕೋದ್ಧಾರ. ನಮ್ಮ ಹುಟ್ಟು ನಾಡು ನಮಗೆ ಜನ್ಮ ಸ್ಥಾನ ಕರ್ಮಸ್ಥಾನ, ರುದ್ರಸ್ಥಾನವೂ ಆಗಬಹುದು. ಜನ್ಮ ಸ್ಥಾನದಲ್ಲಿ, ಕರ್ಮ ಮಾಡುವಾಗ ರಕ್ಷಣೆ ಅಗತ್ಯ. ತನ್ನನ್ನು ತಾನು ರಕ್ಷಿಸುವುದೆಂದರೆ ಇಂದಿನ ಸುಖಕ್ಕಾಗಿ ನಾಳೆಯನ್ನು ಬಲಿಕೊಡಬಾರದು. ಮಾನವನಿಗೆ ಮಾನವತ್ವವೇ ಧರ್ಮ. ಮನಸ್ಸು ಮಾತು ಮತ್ತು ಕ್ರಿಯೆಯಲ್ಲಿ ಏಕತ್ವವೇ ಮಾನವತ್ವ. ಇವುಗಳು ತಮಗೆ ತಾನೇ ರಕ್ಷಣೆ ಕೊಡುತ್ತದೆ. ಸ್ಥಿರ ಬುದ್ಧಿಗಿಂತ ಹೆಚ್ಚಿನ ರಕ್ಷಣೆಯಿಲ್ಲ ಸ್ಥಿರ ಬುದ್ಧಿಯಲ್ಲಿ ಸಹವಾಸ ದೋಷವಾಗುವುದಿಲ್ಲ. ನಮ್ಮ ಸಹವಾಸ ಹೀಗಿದೆ ಎಂಬುದು ಸಹವಾಸದಲ್ಲಿದೆ. ಬುದ್ಧಿಯಲ್ಲಿ ಸ್ಥಿರತೆ ಅಗತ್ಯ. ಅದಕ್ಕೆ ಒಳ್ಳೆಯ ವಿದ್ಯೆ ಬೇಕು. ಬುದ್ಧಿ ಬೇಕು. ವಿದ್ಯೆಯೇ ನಮಗೆ ಸೌಂದರ್ಯ ಕೀರ್ತಿ, ಸುಖಭೋಗ ಕೊಡುವುದು. ವಿದ್ಯೆಯೇ ಗುರುಗಳ ಗುರು ಉತ್ತಮ ವಿದ್ಯೆಯೇ ನಮಗೆ ಉತ್ತಮ ರಕ್ಷಣೆ. ವಿದ್ಯೆಗಿಂತ ಬುದ್ಧಿ ಹೆಚ್ಚು, ಬುದ್ಧಿಗಿಂತ ಆತ್ಮ ಹೆಚ್ಚು, ಆತ್ಮ ಎಂದರೆ ತನ್ನನ್ನು ತಾನು ಅರಿಯುವುದು ನಾನು ಏಕೆ ವಿದ್ಯೆ ಕಲಿತದ್ದು, ಇದರ ಸದುಪಯೋಗವೇನು? ವಿದ್ಯೆಯಿಂದ ಹಣಗಳಿಕೆ ಹೇಗೆ? ಗಳಿಸಿದ ಹಣದ ಉತ್ತಮ ವಿತರಣೆ ಹೇಗೆ ಎಂಬುದನ್ನು ಕಲಿತು ಅರ್ಥ ಮಾಡಿಕೊಂಡರೆ ತನ್ನನ್ನು ತಾನು ಸ್ವಲ್ಪ ಮಟ್ಟಿಗಾದರೂ ರಕ್ಷಿಸಿಕೊಂಡಂತೆ. ರಕ್ಷಣೆ ಎಂದರೆ ಶಿಕ್ಷೆಯೂ ಹೌದು ಶಿಕ್ಷಣವು ಹೌದು? ಯೌವ್ವನದಲ್ಲಿ ತಮ್ಮನ್ನು ರಕ್ಷಿಸುವುದು ಸತ್ಯ, ಧರ್ಮ. ನಾವು ಅವುಗಳನ್ನು ರಕ್ಷಿಸಬೇಕು. ಅದೇ ರಾಷ್ಟ್ರ ರಕ್ಷಣೆ. ರಾಷ್ಟ್ರ ರಕ್ಷಣೆಗೆ ಮೂಲ ನಮ್ಮ ರಕ್ಷಣೆ. ಅದಕ್ಕೆ ಸೂತ್ರ ದೈವ ಪ್ರೀತಿ ಪಾಪಭೀತಿ ಮತ್ತು ಸಂಘ ನೀತಿ ಇವುಗಳಿಂದ ನಮ್ಮನ್ನು ನಾವೆ ಉ ರಕ್ಷಿಸಿಕೊಳ್ಳಬೇಕು. ಯೌವ್ವನದಲ್ಲಿ ನಮ್ಮ ರಕ್ಷಣೆ ಸಂಸಾರ ಅಲ್ಲ ಸಂಸ್ಕಾರ. ತಮ್ಮನ್ನು ತಾವು ರಕ್ಷಿಸಿಕೊಳ್ಳುವುದೆಂದರೆ ಉತ್ತಮ ಗುಣವನ್ನು ಹೊಂದಿಕೊಳ್ಳುವುದು. ಗುಣವೇ ತಮ್ಮ ಅಲಂಕಾರ ಅದೇ ಮಾನವನಿಗೆ ಶೃಂಗಾರ, ಯೌವ್ವನದಲ್ಲಿ ತನ್ನನ್ನು ತಾನು ರಕ್ಷಿಸಿಕೊಳ್ಳಲು ತಮ್ಮಲ್ಲಿರುವ ಕಾಮ, ಕ್ರೋಧ, ಮೋಹ, ಲೋಭಗಳನ್ನು ತೊರೆದು ಪೂರ್ಣ ತೊರೆಯಲು ಅಸಾಧ್ಯವಾದರೆ ಆದಷ್ಟು ತೊರೆದು ಸತ್ಯ, ಧರ್ಮ ಶಾಂತಿ, ಪ್ರೇಮ, ಅಹಿಂಸೆಗಳನ್ನು ಮೈಗೂಡಿಸಿಕೊಳ್ಳಬೆಕು. ಈ ಗುಣಗಳಿಲ್ಲದ ವಿದ್ಯೆ ಶೂನ್ಯ. ಯೌವ್ವನದಲ್ಲಿ ಮಹಿಳೆಯರು ತಮ್ಮಲ್ಲಿ ಮಹಿಳತ್ವವನ್ನು ರಕ್ಷಿಸಿಕೊಂಡು ಪ್ರೀತಿ, ತ್ಯಾಗ, ಶಾಂತ ಗುಣಗಳೊಂದಿಗೆ ಮುಂದಿನ

ಪೀಳಿಗೆಯ ಉದ್ಧಾರಕ್ಕೆ ತಮ್ಮ ತನು, ಮನ, ಧನಗಳನ್ನು ಅರ್ಪಿಸಿಕೊಳ್ಳಬೇಕು.

**ಇತರರಿಗೆ ರಕ್ಷಣೆ:-** ಇತರರಿಗೆ ರಕ್ಷಣೆಗೆ ಮೊದಲು ತನ್ನನ್ನು ತಾನು ಎಲ್ಲಾ ವಿಧದಿಂದಲೂ ರಕ್ಷಿಸಿಕೊಳ್ಳಬೇಕು. ಸಹಾಯ ಹಸ್ತ ಇದರ ಅಡಿಪಾಯ. ತನಗೆ ಯಾವ ಕಾರ್ಯ ಅಹಿತವಾಗಿದೆಯೋ ಅಂತ ಘಟನೆಗಳನ್ನು ತಾನು ಇತರರಿಗೆ ಮಾಡಬಾರದು. ಈ ವರ್ತನೆ ಮುಖ್ಯ. ನಾವು ಬಹಳ ಶತಮಾನಗಳನ್ನು ಗುಲಾಮಗಿರಿಯಲ್ಲಿ ಕಳೆದಿರುತ್ತೇವೆ. ಶತಮಾನಗಳ ಗಳಿಕೆಯನ್ನು 50 ವರ್ಷಗಳಲ್ಲಿ ನಿವಾರಿಸಲಾಗುವುದಿಲ್ಲ. ಗುಲಾಮಗಿರಿಯಲ್ಲಿ ಮೈಗೂಡಿಸಿಕೊಂಡ ಕೆಲವು ವಿಶಿಷ್ಟ ಚಟಗಳಿವೆ. ಅವು ಯಾವುವೆಂದರೆ ತಮಗಿಂತ ಮೇಲಿನವರಲ್ಲಿ ದೈನ್ಯ. ನಮಗಿಂತ ಕೆಳದರ್ಜೆಯವರಲ್ಲಿ ದರ್ಪ ಪ್ರದರ್ಶನ. ಸಹೋದ್ಯೋಗಿ ಸಮಾನಶೀಲವೆಂಬುದನ್ನು ನಾವು ಅರಿಯಬೇಕು. ತಮ್ಮ ಭಾಂದವ್ಯ ಮೇಸ್ತ್ರಿ, ಕೂಲಿ ಭಾಂದವ್ಯ ಇದಕ್ಕೆ ದಾರಿ ಒಂದೇ ಪ್ರೀತಿ. ಪ್ರೀತಿ ನಮಗೆ ನಮ್ಮ ಆಕಾರ, ಉಸಿರಾಟ, ಉಪದೇಶ, ಆನಂದ ಸತ್ಯ, ಜೀವನ ವಲ್ಲದೆ ಉನ್ನತಿಯೂ ಆಗಿದೆ. ಯಾವ ಕಾಲಕ್ಕೂ ತನ್ನನ್ನು ಪ್ರೀತಿಯಿಂದ ವಂಚಿಸಿಕೊಳ್ಳಬಾರದು. ಇತರರಿಗೆ ಪ್ರೀತಿಯಲ್ಲಿ ವಂಚನೆಯನ್ನು ತೋರಿಸಕೂಡದು. ಇದು ನಮ್ಮನ್ನು ನಾವು ರಕ್ಷಿಸಿಕೊಳ್ಳುವ ಒಂದು ಉಪಾಯ. ಬದುಕಲು ಹೆದರಬಾರದು. ಸಾಯಲು ಅಂಜಬಾರದು. ಈ ಎರಡೂ ನಮಗೆ ದೈವದತ್ತ. ನಾವು ನಮ್ಮ ಪೀಳಿಗೆ ಬದುಕಬೇಕು. ನಾಶವಾಗಬಾರದು. ಅಜ್ಞಾನಿಯಾಗಬಾರದು. ತಿಳಿದುಕೊಳ್ಳಬೇಕು. ಆನಂದಿಸಬೇಕು. ದುಃಖಿಸಬಾರದು. ದುಃಖದಲ್ಲಿಯೂ ಆನಂದವಿದೆ. ಆನಂದದಲ್ಲಿಯೂ ದುಃಖವಿದೆ. ಸುಖ ದುಃಖದ ಅರಿವೇ ನಮ್ಮ ರಕ್ಷಣೆ ಮತ್ತು ಇತರರಿಗೆ ರಕ್ಷಣೆ. ಇದನ್ನರಿತ ಮಹಾತ್ಮರು ಹೀಗೆನ್ನುತ್ತಾರೆ. "ಮನಃಶಾಂತಿ ಇಲ್ಲದ ಮೇಲೆ ಆಯುಷ್ಯವೇಕೆ? ಶಾಂತಿ ಇಲ್ಲದ ಮೇಲೆ ಸೌಖ್ಯವೇಕೆ?" ಗಂಡಿನ ಎದೆ ಇರಬೇಕು ಹೆಣ್ಣಿನ ಕರುಳಿರಬೇಕು. ಲಲನೆಯಿಲ್ಲದ ಲಾವಣ್ಯವೇಕೆ? ಎಂತಾ ಅರ್ಥಗರ್ಭಿತ ತತ್ವ. ಇದನ್ನರಿವುದೇ ನಮಗೆ ರಕ್ಷಣೆ, ಎಲ್ಲಿಯವರೆಗೆ ಇತರರ ಬಗ್ಗೆ ನಮ್ಮಲ್ಲಿ ಕಾಳಜಿ ವಿಶ್ವಾಸ, ಸಹಾನುಭೂತಿಯಿಲ್ಲವೋ ಅಲ್ಲಿಯವರೆಗೂ ನಮ್ಮ ಬದುಕು ಪೂರ್ಣತೆ ಹೊಂದುವುದಿಲ್ಲ. ನಮ್ಮ ರಕ್ಷಣೆಗೆ ಸಾಧನೆಗಳು ಬೇಕು. ಎಲ್ಲಾ ಸಾಧನೆಗಳು ಅಜ್ಞಾನವನ್ನು ಕಳೆದುಕೊಳ್ಳುವುದಕ್ಕಾಗಿಯೇ ಹೊರತು ಜ್ಞಾನದ ಸಂಪಾದನೆಗಾಗಿ ಅಲ್ಲ. ಇದೇ ನಾವು ಅನುಸರಿಸಬೇಕಾದ ದಾರಿ, ಪಡಿಯಬೇಕಾದ ಮಾರ್ಗದರ್ಶನ. ಮಾರ್ಗಡೊಂಕಾಗಿರಬಹುದು. ನಡಿಗೆ ನೆಟ್ಟಗಿರಬೇಕು.

**ಸಾಮಾಜಿಕ ಹಾಗೂ ರಾಜಕೀಯರಂಗದಲ್ಲಿ ಪಾತ್ರ:-** ಸಾಮಾಜಿಕ ವೆಂದರೆ ಸಮಾಜಕ್ಕಾಗಿ, ಜನರಿಗಾಗಿ ಜನ ಕಲ್ಯಾಣಕ್ಕಾಗಿ, ಜನ ಸೇವೆಗಾಗಿ ತನ್ನನ್ನು ತಾನು ಸಂಪೂರ್ಣವಾಗಿ ಅರ್ಪಿಸಿಕೊಳ್ಳುವುದು, ಸೇವೆಯೆಂದರೆ ಭಾಷಣ ವಲ್ಲ, ಕೃತಿಯಿಲ್ಲ ಮೆಚ್ಚಿಗೆಗಾಗಿ, ವಿಡಿಯೋ ಕ್ಯಾಮರಕ್ಕಾಗಿ ಮಾಡುವ ಸೇವೆ. ಆತ್ಮ ವಂಚಕ ಸೇವೆ. ಸೇವೆ ಸೇವೆಗಾಗಿ, ಇನ್ನೊಬ್ಬರ ಏಳ್ಗೆಗಾಗಿ ಮಾತ್ರ, ಸೇವೆಯೆಂದರೆ ತಮಗೆ ದೈಹಿಕ ಹಿಂಸೆಯಾಗಬಹುದು. ಅದರಲ್ಲಿ ಸಮಾಜಕ್ಕೆ ಬೆಳಕನ್ನೀಡ ಬೇಕು. ಉದಾಹರಣೆ:- ಮೇಣದ ಬತ್ತಿ ತನ್ನನ್ನು ತಾನು ಹಿಂಸಿಸಕೊಳ್ಳುತ್ತದೆ. ಆದರೆ ಬೆಳಕು ನೀಡಿ ಕತ್ತಲೆಯಲ್ಲಿ ಬೆಳಕು ಕೊಡುತ್ತದೆ. ತನ್ನ ವಿದ್ಯೆ, ಜ್ಞಾನ, ನುರಿತ, ತ್ವರಿತ, ಬುದ್ಧಿ ಸಂಪಾದನೆಯ ಒಂದು ಭಾಗ ಸಮಾಜಕ್ಕಾಗಿ ಮುಡಿಪಾಗಿಟ್ಟಿರಬೇಕು. ಏಕೆಂದರೆ ನಾವು ಗಳಿಸಿದ ಪ್ರತಿಯೊಂದೂ ಸಮಾಜದಿಂದ ನಮಗೆ ದೊರಕಿದ್ದು. ಸಮಾಜವಿಲ್ಲದೆ ನಾವಿಲ್ಲ. ನಾವಿಲ್ಲದಿದ್ದರೆ ಸಮಾಜಕ್ಕೆ ನಷ್ಟವಿಲ್ಲ. ಸಮಾಜವಿಲ್ಲದಿದ್ದರೆ ನಮಗೆ ನಷ್ಟ. ನಮ್ಮ ಸೇವೆ ಸಮಾಜಕ್ಕೆ ಅವಶ್ಯವಿರಲಿಕ್ಕಿಲ್ಲ. ಆದರೆ ಸಮಾಜ ಸೇವೆ ನಮಗೆ ಅತ್ಯವಶ್ಯಕ ನಾವು ಸಾಮಾಜಿಕ ಸೇವೆ ಮಾಡುವುದರಿಂದ ತೃಪ್ತಿ ನಮಗೆ ಅತ್ಯವಶ್ಯಕ ನಾವು ಸಾಮಾಜಿಕ ಸೇವೆ ಮಾಡುವುದರಿಂದ ತೃಪ್ತಿ ನಮಗೆ. ಕಷ್ಟ, ಸುಖ ನಮಗೆ ಪವಿತ್ರವಾದ ಭಾರತ ಚರಿತ್ರೆಯಲ್ಲಿ ಸೇವೆಗೆ ಮಹತ್ವವಿದೆ. ಮಾತಾಪಿತೃ ಸೇವೆ, ಗುರುಸೇವೆ, ದೇಹಸೇವೆ, ದೇಶಸೇವೆ, ಸಮಾಜಸೇವೆ ಹೀಗೆ ನಮ್ಮ ಆಯುಷ್ಯದಲ್ಲಿ ಸೇವೆಗೆ ಮಹತ್ವವಲ್ಲದೆ ಸ್ವಾರ್ಥಕ್ಕೆ ನಿಂದನೆ ಇದೆ. ಭಾರತೀಯರಾದ ನಾವು ಭಾರತವನ್ನು ಅರಿಯಬೇಕು. ಹಣವನ್ನು ಎಲ್ಲಿಯಾದರೂ ಎಲ್ಲಿಂದಾದರೂ ಸಂಪಾದಿಸಬಹುದು. ಆದರೆ ಅದರ ವಿನಿಯೋಗ, ಸದುಪಯೋಗ ನಮ್ಮ ತಾಯಿ ನಾಡಿಗೆ ಮುಡಿಪಾಗಿರಬೇಕು. ಸಾಮಾಜಿಕ ಕ್ಷೇತ್ರದಲ್ಲಿ ಅಸಮಾನತೆಯ ನಿವಾರಣೆಗೆ ಶ್ರಮಿಸುವುದು ಸಹಕಾರ ಹಸ್ತ ಉಪಕಾರ ಮಾಡುವುದು ಉಪಕಾರ ಮಾಡಲು ಸಾಧ್ಯವಾಗದೆ ಹೋದರೆ ಅಪಕಾರ ಮಾಡುವುದು ಬೇಡ. ಅದೇ ದೊಡ್ಡ ಉಪಕಾರ. ಸಾಮಾಜಿಕ ಪಾತ್ರವೆಂದರೆ ಸಂಕ್ಷಿಪ್ತವಾಗಿ ತನ್ನ ಹೆಸರು, ತನ್ನ ಜನಾಂಗದ ಹೆಸರು, ತನ್ನ ನಾಡಿನ ಹೆಸರು. ವಿದ್ಯೆ ಗಳಿಸಿದ ಸಂಸ್ಥೆಯ ಹೆಸರು. ವಿದ್ಯೆ ಕಲಿಸಿದ ಗುರುವಿನ ಹೆಸರು ಮುಖ್ಯವಾಗಿ ನಮಗೆ ಜೀವ, ರಕ್ತ, ಬಟ್ಟೆ , ಊಟ, ವಸತಿ, ಕೊಟ್ಟು, ಸಾಕಿ ಸಲಹಿದ ಮಾತಾಪಿತೃಗಳ ಸೇವೆ ವಯಸ್ಕರ ರಕ್ಷಣೆ ಇವೆಲ್ಲಾ ನಾವು ಮಾಡಬೇಕಾದ ಸಾಮಾಜಿಕ ಸೇವೆ. ಈ ಪಾತ್ರವನ್ನು ನಿರ್ವಹಿಸಲು ಸೂಕ್ತ ಸಮಯ ಯೌವ್ವನ. ಯೌವ್ವನದಲ್ಲಿ ಸಾಮಾಜಿಕ ಕೆಲಸದಲ್ಲಿ ಖಡ್ಡಾಯವಾಗಿ ಪಾತ್ರವಹಿಸಬೇಕು. ಇದೇ ದೇಶದ ಮುನ್ನಡೆಗೆ ಅಡಿಪಾಯ ಬುನಾದಿ.

**ರಾಜಕೀಯ:-** ಇದೊಂದು ಮಹತ್ಕಾರ್ಯ. ಆದರೆ ಇಂದು ಕೊಳೆತು ನಾರುತ್ತಿದೆ. ಗಬ್ಬು ನಾತ ಪಸರಿಸುತ್ತಿದೆ. ಕಾರಣ ಸ್ವಾರ್ಥ. ಸ್ವಾರ್ಥ ಮತ್ತು ಸ್ವಾರ್ಥ! ಸಾಮಾಜಿಕ ಕಳಕಳಿ ಇರುವವರಿಗೆ ಸ್ವಾರ್ಥ ಕಡಿಮೆ. ಯೌವ್ವನದಲ್ಲಿ ಸ್ವಾರ್ಥಬೇಕು. ರಾಜಕೀಯದಲ್ಲಿ ಸ್ವಾರ್ಥಬೇಕು, ಅಂದರೆ ತನ್ನ ದೇಶದ ಏಳ್ಗೆಗೆ ಕಷ್ಟ ಪಟ್ಟು, ದುಡಿದು ದೇಶ ರಕ್ಷಣೆ, ದೇಶೋದ್ಧಾರ ಮಾಡುತ್ತೇನೆಂಬ ಸ್ವಾರ್ಥವಿರಬೇಕು. ಹೊರತು ತನ್ನ ಉದ್ಧಾರಕ್ಕಾಗಿ ಸ್ವಾರ್ಥ ಇರಲೇಬಾರದು. ವಿದ್ಯಾರ್ಥಿಗಳಿಗೆ ರಾಜಕೀಯದ ಗಂಧವಿರಬೇಕು. ಆದರೆ ರಾಜಕೀಯದಲ್ಲಿ ಮುಳುಗಿರಬಾರದು. ರಾಜಕಾರಣಿಗಳನ್ನು ದೂರವಿಟ್ಟಷ್ಟೂ ಒಳಿತು. ವಿದ್ಯಾಭ್ಯಾಸದ ನಂತರ ಯೌವ್ವನದ ಭರದಲ್ಲಿ ದೇಶ ಸೇವೆ, ಸಮಾಜ ಸೇವೆಗಾಗಿ,

ಸೇವಾಭಾವದಿಂದ ರಾಜಕೀಯ ಪ್ರವೇಶಿಸಬೇಕು. ರಾಜಕೀಯ ಆದರ ಇತಿ ಮಿತಿಯಲ್ಲಿ ರಬೇಕೇ ಹೊರತು ಬೀದಿಗಿಳಿಯಬಾರದು. ಮತಕ್ಕಾಗಿ ಪೊಳ್ಳು ಆಶ್ವಾಸನೆ ಹಣ ಹೆಂಡ, ವಸ್ತ್ರಗಳ ವಿತರಣೆ, ಮತ ಪೆಟ್ಟಿಗೆಯ ಅಪಹರಣವನ್ನು ವೀಕ್ಷಿಸುವಾಗ ನಮ್ಮ ಭಾರತದ ಭವ್ಯ ಪರಂಪರೆಯ ಅವನತಿ ಕಾಣಬಹುದು. ಇದರ ವಿರುದ್ಧ ರಾಜಕೀಯ ಹೋರಾಟವಿರಬೇಕು. ಕತ್ತಲೆಗೆ ಬೆಳಕು ಕೂಡ ಬೇಕಲ್ಲದೆ ಬೆಳಕನ್ನು ಕತ್ತಲೆಯಾಗಿ ಮಾರ್ಪಡಿಸಬಾರದು.

ಒಟ್ಟಿನಲ್ಲಿ ಯೌವ್ವನ ರಾಷ್ಟ್ರದ ಗುಪ್ತ ಧನ. ರಾಷ್ಟ್ರದ ಪರಿಸರ, ರಾಷ್ಟ್ರದ ಭಂಡಾರ, ಸಮಾಜದ ಅಡಿಗಲ್ಲು. ಅವರ ಧ್ಯೇಯ, ಉದ್ದೇಶ ಸಾತ್ವಿಕವಾಗಿರಲಿ. ತನ್ನ ನಾಡಿನ ರಕ್ಷಣೆ ದೇಶದ ರಕ್ಷಣೆಗೆ ಕಂಕಣಬದ್ಧವಾಗಿರಲಿ. ತನ್ನ ಜೀವನೋಪಾಯಕ್ಕಾಗಿ ಹೆಚ್ಚಾಗಿ ಸರಕಾರಿ ಉದ್ಯೋಗವನ್ನು ನಿರೀಕ್ಷಿಸದೆ ತನ್ನ ಸ್ವಂತ ದುಡಿಮೆ, ದೈಹಿಕ ಸಾಮರ್ಥ್ಯವನ್ನು ಉಪಯೋಗಿಸಿ ಧರ್ಮ, ನ್ಯಾಯ ಸಮ್ಮತವಾದ ಸಂಪಾದನೆ, ಸಂಪಾದನೆಯಲ್ಲಿ ಸಮಾಜ ಉದ್ಧಾರ, ಮತ್ತು ಸುಧಾರಣೆಗೆ ಮುಡಿಪಾಗಿರಿಸಲಿ. ದೇಶದ ಸಂಸ್ಕೃತಿ, ಸಂಪ್ರದಾಯ ದೇಶದ ಹೆಸರಿನ ಹೆಗ್ಗಳಿಕೆಗೆ ಪಾತ್ರವಾಗಲಿ, ಸಾಮಾಜಿಕ, ರಾಜಕೀಯ ರಂಗದಲ್ಲಿ ಸತ್ಯವ್ರತದಲ್ಲಿ ಕೀರ್ತಿಗಳಿಸಲಿ

ಲೇಖನ : ಚೇಂದ್ರಿಮಾಡ ಜಿ. ಮುತ್ತಪ್ಪ
ನಿವೃತ್ತ ಅಧಿಕಾರಿ,
B,128 ಸಂತೋಷ ನಿವಾಸ್,
ಮಾರ್ಕೇಟ್ ರಸ್ತೆ, ಕುಶಾಲನಗರ 571234

---

# ಪಾಲೂರಪ್ಪನ ಕೃತಿ

ಕೊಡಗಿನ ಪುರಾತನ ಐತಿಹಾಸಿಕ ಹಿನ್ನಲೆಯುಳ್ಳ ಹೆಚ್ಚು ಎತ್ತರದಲ್ಲಿರುವ ದೇವಸ್ಥಾನವೆಂದು ಪ್ರಸಿದ್ಧಿ ಪಡೆದು ಇತ್ತಿಚೇಗೆ ರಾಷ್ಟ್ರ ಮಟ್ಟದಲ್ಲಿ ಸುದ್ದಿ ಮಾಡಿದ ಕೊಡಗಿನ ಪಾಲೂರು ಗ್ರಾಮದಲ್ಲಿ ನೆಲೆ ನಿಂತಿರುವ ಶ್ರೀ ಪಾಲೂರು ಮಹಾಲಿಂಗೇಶ್ವರ ಹಾಗೂ ಹರಿಶ್ಚಂದ್ರ ದೇವಸ್ಥಾನದಲ್ಲಿ ಇದೇ ಏಪ್ರಿಲ್ 18,19 ರಂದು ನಡೆಯುವ ವಾರ್ಷಿಕೋತ್ಸವದ ವರ್ಣನೆಯನ್ನು ಹಾಡಿನ ರೂಪದಲ್ಲಿ ರಚಿಸಲಾಗಿದೆ.

ಪಾಲೂರಪ್ಪನ ಅಣ್ಣ ಇಗ್ಗುತಪ್ಪ ತಮ್ಮ ಮಾದೂರಪ್ಪ ಹಾಗೂ ತಂಗಿ ಪನ್ನಂಗಾಲ ತಮ್ಮೆಯರನ್ನು ತನ್ನ ಹಿಂದೆ ಮುಂದೆ ನೆಲೆ ನಿಲ್ಲಿಸಿ, ತಾನು ನೂರಾಹತ್ತು ಮೆಟ್ಟಿಲುಗಳನ್ನು ಹತ್ತಿ ಬರುವ ಭಕ್ತರನ್ನು ಕಾಯುವ ಮತ್ತು ವೈಭವದ ಈ ಉತ್ಸವಕ್ಕೆ 18 ಚಂಡೆಗಳ ನಾದ ಶಬ್ಧ ಇಡೀ ಕೊಡಗು ನಾಡಿಗೆ ಮೆರಗು ಹೆಮ್ಮೆ ತರುವಂತಹದು.

# ಪಾಲೂರಪ್ಪನ ಕೃತಿ

ಒಟ್ಟಿಗೆ ಒಟ್ಟಿಗೆ ಒಂಭತ್ತು ಚಂಡೆ ಪಾಲೂರಪ್ಪಂಗೇ....?
ಒಂಭತ್ತು ಒಂಭತ್ತು ಹದಿನೆಂಟು ಚಂಡೆ ಪಾಲೂ-ರಪ್ಪಂಗೆ।।
ಬನ್ನಿ ಬನ್ನಿ ಭಕ್ತರೆಲ್ಲಾ, ಪಾಲೂರಿಗ್ಹೋಗೋಣಾ।
ಬನ್ನಿ ಬನ್ನಿ ಭಕ್ತಲೆಲ್ಲಾ ಪಾಲೂರಿಗ್ಹೋಗೋಣಾ
।। ಒಟ್ಟಿಗೆ।।

ಪಾಲೂರಪ್ಪಂಗೆ ನಮಿಸುತ್ತಾ, ನೂರಾಹತ್ತು ಮೆಟ್ಲು ಹತ್ತಿ।
ಸ್ವಾಮಿ ಶಿವಾ ಎಂದು ಶಿವನ ಪಾದಕ್ಕೆರೋಗೋಣಾ।।
ಹಾಲು ಹರಿಸಿದಾ ಪಾಲೂರಪ್ಪನ ಪಾದಕ್ಕೆರಗೋಣಾ।
ಹಾಲು ಹರಿಸಿದಾ ಪಾಲೂರಪ್ಪನ ಪಾದಕ್ಕೆರಗೋಣಾ
।। ಒಟ್ಟಿಗೆ।।

ಬಸವನಿಗೆ ಕೈ ಮುಗಿದು, ಸುಬ್ರಮಣ್ಯಂಗೆ ವಂದಿಸುತ್ತಾ।
ನಾಗನಿಗೆ ಹಾಲೆರೆದು, ಮುಂದೆ ಸಾಗೋಣ, ಮುಂದೆ ಸಾಗೋಣಾ।।
ಗಣಪನಾ ಪಾದಕ್ಕೆರಗಿ ಹಣ್ಣು ಗಾಯಿ ಹೂವ ಕೊಟ್ಟು।
ಮಂಗಳಾರತಿಯ ಸೇವೆ ಮಾಡೋಣ, ಸೇವೆ ಮಾಡೋಣಾ
।।ಒಟ್ಟಿಗೆ।।

ಕಾವೇರಿಲಿ ಮಿಯಲೆಂದು, ಹರಿಶ್ಚಂದ್ರಕ್ಕೆ ಬಂದೇವು।।
ಕಂಡೆವು ನಾವಲ್ಲಿ ಮೂಲ ಪಾಲೂರಪ್ಪನ ಮೂಲಪಾಲೂರಪ್ಪನಾ।।
ಕೊಡಿಮರವಾ ನೋಡಲೆಂದು ಬಂದಿರುವ ಭಕ್ತರಾ।
ಪೊಳಿಸುತ್ತಿ-ನೋಡೋಣೊಮ್ಮೆ ಬನ್ನಿರಿ, ಪೊಳಿಸುತ್ತಿ ನೋಡೋಣೊಮ್ಮೆ ಬನ್ನಿರಿ।।

ಮಹಾಲಿಂಗೇಶ್ವರಂಗೆ ಮಂಗಳಾರತಿ ಸೇವೆ
ಪಾಲೂರಪ್ಪಂಗೆ ಎತ್ರಾಟ ಸೇವೆ
ಮುಂದೆ ಅಣ್ಣ ಇಗ್ಗುತಪ್ಪಾ। ಹಿಂದೆ ತಮ್ಮ ಮಾದೂರಪ್ಪ
ಮೋಡ ಕವಿದು ಬರುವ ತಂಗೀ, ಪನ್ನಂಗಾಲ.....
ಪನ್ನಂಗಾಲ ತಮ್ಮೆಯೋ, ಪನ್ನಂಗಾಲ ತಮ್ಮೆಯೋ,

ಪಾಲೂರಪ್ಪಂಗೆ ನಮಿಸುತ್ತಾ ಎಲ್ಲರಿಗೂ ಪ್ರೀತಿ ಶಾಂತಿ ಬೇಡುತ್ತಾ।
ಕೈಯಾಮುಗಿಯೋಣಾಸ್ವಾಮಿ ಕೈಯಾ ಮುಗಿಯೋಣಾ।।
ಪಾಲೂರಪ್ಪಂಗೆ ವಂದಿಸುತ್ತಾ ನೂರಾಹತ್ತು ಮೆಟ್ಲು ಇಳಿದು, ಕಾಳಿಕಾಂಬೆಗೆ
ಧೂಪಾರತಿ ಮಾಡಲೆಂದು ಮುಂದೆ ಸಾಗೋಣಾ ಮುಂದೆ ಸಾಗೋಣ।।

ಹಾಲು ಹರಿಸಿದಾ ಪಾಲೂರಪ್ಪನ ಪಾದಕ್ಕೆರಗೋಣಾ.
ಹಾಲೂ ಹರಿಸಿದಾ ಪಾಲೂರಪ್ಪನ ಪಾದಕ್ಕೆರಗೋಣಾ
ಒಟ್ಟಿಗೆ ಒಟ್ಟಿಗೆ ಒಂಭತ್ತು ಚಂಡೇ ಪಾಲೂರಪ್ಪಂಗೇ
ಒಂಭತ್ತು ಬಂಭತ್ತು ಹದಿನೆಂಟು ಚಂಡೇ ಪಾಲೂರಪ್ಪಂಗೇ
।।ಒಟ್ಟಿಗೆ।।

ರಚನೆ. ಬೈತಡ್ಕ ಜಾನಕಿ ಬೆಳ್ಯಪ್ಪ.

# ಕೆಮಿ ಮಾತ್

ಎದ್ದ್ ಬಾ, ನೀ ನುಗ್ಗಿ ಬಾ, ನೀ ಗೆದ್ ಬಾ
ಎದೆ ತಟ್ಟಿ, ಭುಜ ತಟ್ಟಿ ಮುನ್ನುಗ್ಗಿ ಬಾ
ಭುಜಕ್ಕೆ ಭುಜಕೊಟ್, ಹೆಗ್ಲ್‌ಗೆ ಹೆಗ್ಲ್ ಕೊಟ್ಟ್-ತಲೆ ಎತ್ತಿ ನೀಬಾ
ನಡೆವಲ್ಲಿ ನಡ್ದ್, ಈಜುವಲ್ಲಿ ಈಜಿ ನೀ ದಡ ಸೇರ್ ಬಾ
ಕೊಟ್‌ತಿಂಬ್ಲೊಕುತ ಚಾಂಪಹೇಳ್ದ ಮಾತ್
ಜಗಳ ಒಳ್ಳೆದಲ್ಲಾತ ಚಾಮೆವ್ವನುಡ್ದ ನುಡಿ
ನಿತ್ಯ ಸತ್ಯ ತೇಳುದರನೀ ಮರಿಬ್ಯಾಡ
ದೀಪಂದ ದೀಪ ಹೊತ್ತಿರೆ ಹೊತ್ತಿಸಿದ ದೀಪ ಮಂಕಾದುಲೆ
ನೀದುಡ್ದ್ ಫಡ್ದರ ಹಣ ಸಮಾಜಕ್ಕೂ ಕೊಟ್ಟರೆ
ನಿನ್ನ ಭಾಗ್ಯ ಕಮ್ಮಿ ಆದುಲೆ, ಕೊಟ್ಟದುಟ್ಟಲೆ ಆದ್ ನಿಂಗೇ,
ಕೊಡದೆ ಇದ್ದದ್ ಇನ್ನಾರಿಗೋಂತೇಳುವ ಮಾತ್‌ನ ಗ್ಯಾನ ಇಸಿಕಾ,
ದ್ವೇಷರೋಷಂತೇಳಿ ಕಂಡಿದ್ದರೆ ಕಡೆಗಾದು ಸರ್ವನಾಶ
ಯಾರ್ನೇ ನೋಡು ನೀ ಅವ್‌ಸಪ್ಪೆ ಆಗೊಳೊ
ಯಾರ್ನೇ ಕೇಳ್ ನೀ ಅವ್ ಅಯ್ಯೋಂತೇಳಿವೆ
ಯಾರ್ನೇ ಕರಿ ನೀ ಅವ್ ತಲೆ ಎತ್ತಿ ನೋಡ್ದುಲೆ
ಹಿಂಗ್ಯಾಕೆತ ನೀವ್ ಹೇಳುವರಿಯಾ?
ಊರ್ ಹೋಗೊಂತೇಳಕನ
ಕಾಡ್ ಬಾತ ಕರೆಕನ
ನೀ ಎಂತನ ಬುಟ್ ಹೋದಿಯಾ?
ಆಸ್ತಿ? ಹಣ? ಬಂಗ್ಲೆ? ಕಾರ್? ಛೂ! ಆದಲ್ಲಾ
ಮತ್ತೆಂತನಾಂತ ನೀವ್ ಹೇಳುವರಿಯಾ?
ಫ್ಯಾನ್ ಬಾತ್, ಫೋನ್ ಬಾತ್
ಟಿವಿ ಬಾತ್, ಕಂಪ್ಯೂಟರ್ ಬಾತ್- ಇಪ್ಯೂಟರ್‌ಬಾತ್
ಆದ್ದಾ! ಕರೆಂಟ್ ಬಂದ್ ಹೋತು!
ಭಾರೀ ಭಾರೀ ಬದಲಾವಣೇಂತೇಳಿ ಹಳ್ಳಿಗೆ ಕೊಳ್ಳಿ ಇಸಿ ಆತ್.

- ಬಾರಿಯಂಡ ಜೋಯಪ್ಪ, ಮದೆ.

ದಿನಾಂಕ21-10-2001 ರಂದು ಮಡಿಕೇರಿ ಕಾವೇರಿ ಕಲಾಕ್ಷೇತ್ರಲಿ ಮಾಡ್ದ ಜಿಲ್ಲಾ ಮಟ್ಟದ ದಸರಾ ಬಹುಭಾಷಾ ಕವಿಗೋಷ್ಠಿ ಲಿ ಓದಿದ ಪದ್ಯ.

---

## ನಿಧನ:

ಕೊಡಗಿನ ಮಾಲ್ದಾರೆಯ ನಿವಾಸಿ ದಂಬೆಕೋಡಿ ಎಸ್. ಮುದ್ದಪ್ಪನವರು ದಿನಾಂಕ 23-03-2002 ರಂದು ತಮ್ಮ ಸ್ವಗೃಹದಲ್ಲಿ ನಿಧನರಾದರು. ಇವರಿಗೆ68 ವರ್ಷ ಪ್ರಾಯವಾಗಿತ್ತು. ಶ್ರೀಯುತರು ಪತ್ನಿ, ಒಂದು ಗಂಡು ಮತ್ತು 3 ಹೆಣ್ಣು ಮಕ್ಕಳನ್ನು ಅಲ್ಲದೆ ಅಪಾರ ಬಂಧುವರ್ಗದವರನ್ನು ಅಗಲಿದ್ದಾರೆ. ಜನಾಂಗದ ಕೊಡುಗೈ ದಾನಿ, ಹಿತಚಿಂತಕ, ಸಮಾಜ ಸೇವಕರಾದ ದಿ. ದಂಬೆಕೋಡಿ ಸುಬ್ರಾಯನವರು ಹಿರಿಯಪುತ್ರರಾಗಿದ್ದ ಮುದ್ದಪ್ಪನವರು ಕೃಷಿ ಅಧಿಕಾರಿಯಾಗಿ ನಿವೃತ್ತರಾಗಿದ್ದರು.

-ಪ್ರೊ॥ ಚೆರಿಯಮನೆ ರಾಮಚಂದ್ರ ಮೈಸೂರು

# ಪ್ರಪಂಚದ 7 ಅದ್ಭುತಗಳು

ಕ್ಲಾಸಲಿ ಒಂದ್ ದಿನ ಮಕ್ಕಳಿಗೆ-'ಪ್ರಪಂಚದ7 ಅದ್ಭುತಗ ಯಾವುದು? ತೇಳುವ ಪ್ರಶ್ನೆಗೆ ಉತ್ತರ ಬರಿಯಿಕೆ ಕೊಟ್ಟಿದ್ದೊ, ಪ್ರತಿಯೊಬ್ಬರೂ ಒಂದೊಂದು ಉತ್ತರ ಬರ್ದ್ ಕೊಟ್ಟೊ. ಜಾಸ್ತಿ ಜನ ಈ ಕೆಳಗಿನ7 ಅದ್ಭುತಗಳನ್ನು ಬರ್ದ್ ಕೊಟ್ಟಿದ್ದೊ.

1. ಈಜಿಪ್ಟ್‌ನ ಪಿರಮಿಡ್
2. ತಾಜ್ ಮಹಲ್
3. ಗ್ರಾಂಡ್ ಕಾನ್‌ಯಾನ್
4. ಪನಾಮಾ ಕಾನಾಟ್
5. ಎಂಪೈರ್‌ಸ್ಟೇಟ್ ಬಿಲ್ಡಿಂಗ್
6. ಸೇಂಟ್‌ಪೀಟರ್‌ನ ಬೆಸಿಲಿಕಾ
7. ಗ್ರೇಟ್ ವಾಲ್ ಆಪ್ ಚೈನಾ

ಕೆಲವು ಮಕ್ಕ 'ಕೊಲೋಸಸ್ ಆಫ್ ರೋಡ್‌ಸ್, 'ಲೀನಿಂಗ್ ಟವರ್ ಆಫ್ ಪಿಸಾ ಮತ್ತೆ 'ಹ್ಯಾಂಗಿಗ್ ಗಾರ್ಡ್‌ನ್ ಆಫ್ ಬೆಬಿಲೋನಿಯಾ, ತಾಜ್‌ಮಹಲ್ ಇನ್ನೊಂದೆರಡ್ ಕೂಡ ಪ್ರಪಂಚದ ಅದ್ಭುತಗತೇಳಿ ಚರ್ಚೆ ಮಾಡ್ತಾ ಇದ್ದೊ, ಹಿಂಗೆ ಟೀಚರ್ ಮತ್ತೆ ಮಕ್ಕಳಲ್ಲಿ ಚರ್ಚೆ ನಡೀತಾ ಇರ್‌ಕಾಕನ ಕೊನೇಬೆಂಚ್‌ಲಿ ಕುದ್ದಿದ ಒಂದ್ ಗೂಡೆ ಮಾತ್ರ ಅವಳ ಉತ್ತರ ಪತ್ರಿಕೆನ ಕೊಡದೆ ಸುಮ್ಮನೆ ಕುದ್ದ್ ಕಂಡಿತ್ತ್.

ಟೀಚರ್‌ಗೆ ಸಿಟ್ಟ್‌ಬಂದ್ 'ಯಾಕೆ ನಿಂಗೆ ಪೇಪರ್‌ಕೊಡಿಕೆ ಇಷ್ಟ, ಇಲ್ಲೆನಾ?' ತೇಳಿ ಕೇಳ್ತ್. ಅದಿಕ್ಕೆ ಆ ಗೂಡೆ

"ಮೇಡಮ್‌ಬರೀ 7 ಅದ್ಭುತಗಳ್ನ ಬರಿಯಕೆ ಕಷ್ಟಾಗ್ತಾ ಉಟ್ಟು," ತೇಳ್ತ್, "ನಿನ್‌ತಲೆ", ಟೀಚರ್ ಕೋಲ್‌ತಕಂಡ್ ಅವಳ ಹತ್ರಕ್ಕೆಹೋತ್,

ಎಲ್ಲಿ ಎಂತೆಂತ ಬರ್ದೊಳ ಓದ್‌ನೋಡೊನೊ."

ಆ ಗೂಡೆ ಎದ್ದ್ ನಿತ್ತ್ ನಿದಾನಲಿ ಓದಿಕೆ ಶುರು ಮಾಡ್ತ್

"ಮೇಡಮ್ ನಂಗೆ ಅನ್ನಿಸೋ ಪ್ರಕಾರ ಪ್ರಪಂಚದ7 ಅದ್ಭುತಗ ಯಾವುದು ತೇಳಿರೆ.

1) ಸ್ಪರ್ಶ
2) ರುಚಿ
3) ನೋಟ
4) ಶಬ್ದ

ಗೂಡೆ ಸ್ವಲ್ಪ ಹಿಂಜರ್‌ದ್ ಮತ್ತೆ ಮುಂದುವರೆಸಿತ್.

5) ಅನುಭವ
6) ನಗೆ
7) ಮತ್ತೆ ಪೀತಿ.

ಇಡೀ ಕ್ಲಾಸ್‌ನ ಮಕ್ಕ್ ಅದ್ನ ಕೇಳಿ ಸ್ವಲ್ಪ ಹೊತ್ತು ಸ್ಥಂಭೀಭೂತರಾದವರಂಗೆ ನಿಶಬ್ಧವಾಗಿ ಬುಟ್ಟೊ. ಟೀಚರ್‌ಗೂ ಇದ್ನ ಯೋಚನೆ ಮಾಡಿ ಆಶ್ಚರ್ಯಆತ್. ಸಾಮಾನ್ಯವಾಗಿರುವ ಈ ವಿಷಯ ನಿಜವಾಗಿ ಅದ್ಭುತದ ಸಂಗತಿಗಳೇ.

- ಎಡಕೇರಿ ಸುದರ್ಶನ್, ಬೆಂಗಳೂರು.

---

ತಾನು ಮುಂದೆ ಹೋಗಲಾರ - ಹೋಗುವವರನ್ನು ಬಿಡಲಾರ

# 1997 ರ ಸಂಗಾತಿ ಮುಲ ಬಳಗ



ಸಂಗಾತಿ ದಂಪತಿಗಳೊಟ್ಟಿಗೆ ಕುದ್ದುವ್, ಎಡಂದ ಬಲಕ್ಕೆ : ಪಟ್ಟಡ ಶಿವಕುಮಾರ, ಕಟ್ರತನ ಜಯರಾಂ, ಮಣ್ಣಾಂಡ್ರ ತಮ್ಮಯ್ಯ, ಪೋರೆಯನ ಆನಂದ, ಹುಲಿಮನೆ ರಮೇಶ್, ಕೆಳ್ಗೆ ಕುದ್ದುವ್ ನಿಶಾ ಪಟ್ಟಡ, ಮತ್ತೆ ಮಂಞ್ಞಾ ಪುರ. ಧರಣಿ ಮೊಂಟಡ್ಕ ಗೀತಾ ಮತ್ತೆ ಹೊಸ್ಕೂಕ್ಲು ಹರಿಣಿಯವು ಪೋಟೋಲಿ ಇಲ್ಲೆ.
ಸಂಗಾತಿ ಹುಟ್ಟಿ ಐದ್ ವರ್ಷನಡ್ಸಿಕೆ ಕಾರಣ ಕರ್ತರಾಗಿರ್ರು ನಮ್ಮ ಮೂಲ ಬಳಗದವರಿಗೆ ಮನಪೂರ್ವಕ ವಂದನೆಗಳು.

- ಸಂಗಾತಿ ದಂಪತಿಗಳು

## ಗೌಡ ಯುವಕ / ಯುವತಿಯರಿಗೊಂದು ಸುವರ್ಣ ಅವಕಾಶ

ಕರ್ನಾಟಕ ಸರ್ಕಾರ ಪೋಲಿಸ್ ಇಲಾಖೆ, ಕರ್ನಾಟಕ, ರಾಜ್ಯದ ವಿವಿಧ ಜಿಲ್ಲೆಯಲ್ಲಿ ಕೊಡಗು, ಮೈಸೂರು, ಶಿವಮೊಗ್ಗ, ಹಾಸನ ಇತ್ಯಾದಿ ಸ್ಥಳಗಳಲ್ಲಿ ನಾಗರೀಕ ಪೋಲಿಸ್‌ಪೇದೆ, ಸಶಸ್ತ್ರ ಮೀಸಲು ಪೋಲಿಸ್ ಪೇದೆ ಹುದ್ದೆಗಳಿಗಾಗಿ ಅರ್ಜಿಯನ್ನು ಕರೆಯಲಾಗಿದೆ.

ಸಾಮಾನ್ಯ ಅಭ್ಯರ್ಥಿಗಳಿಗೆ ವಯಸ್ಸು **21ರಿಂದ 23**
ಹಿಂದುಳಿದ ವರ್ಗಕ್ಕೆ **25ವರ್ಷ**
ಮಾಜಿ ಸೈನಿಕರಿಗೆ **27ವರ್ಷ**, ವಯೋಮಿತಿಯಲ್ಲಿ ಸಡಿಲಿಕೆ ಇದೆ.

ನಾಗರೀಕರ ಪೋಲಿಸ್ ಪೇದೆಗೆ **PUC** ಪಾಸಾಗಿದ್ದು ಹಾಗೂ ಸಶಸ್ತ್ರ ಪೋಲಿಸ್ ಪೇದೆಗೆ **SSLC** ಪಾಸಾಗಿರಬೇಕು. ನಿಗದಿತ ಶುಲ್ಕ ರೂ.25/- ಅನ್ನು ಪಾವತಿಸುವುದು. ಕೊನೆ ದಿನಾಂಕ **15/4/2002.** ಹೆಚ್ಚಿನ ವಿವರಗಳಿಗೆ ಪ್ರಜಾವಾಣಿ **26/3/2002, 29/3/2002** ದಿನಾಂಕ ಹಾಗೂ ಇನ್ನಿತರ ಪತ್ರಿಕೆಯನ್ನು ನೋಡುವುದು. ಅರ್ಜಿಯನ್ನು ಜಿಲ್ಲೆಯ ಪೋಲಿಸ್ ಆರಕ್ಷಕ ಪೋಲೀಸ್, ಇಲಾಖೆ, ಇಲ್ಲಿ ಪಡೆದು ಅಲ್ಲಿಯೇ ಸಲ್ಲಿಸುವಂತೆ ಕೋರಿದೆ.

*ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ*

**☎080/ 3433328 (R)**
**3433014 (O)**
**5283553 (R)**
**5584936 (O)**

*ಪ್ರಕಟಣೆ : ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಸಮಾಜ, ಬೆಂಗಳೂರು.*

Reg. No. KA/SK/MYS-88 Registered : 10-01-96 TCI Kar. 09592

# ಸಂಗಾತಿಯ ಕಾರ್ಯ ನಿರ್ವಾಹಕರ ಮತ್ತು ಓದುಗರ ಗಮನಕ್ಕೆ.

"ಕೊಡಗು ಸಂಗಾತಿ" ಪತ್ರಿಕೆಯ ಸಂಗಾತಿ ಕಾರ್ಯ ನಿರ್ವಾಹಕರಾಗಿ ಈ ಕೆಳಗಿನವರನ್ನು ಮಾತ್ರ ಉಳಿಸಿಕೊಳ್ಳಲಾಗಿದೆ. ಇವರುಗಳು ಮಾತ್ರ ಸಂಗಾತಿ ಬಗ್ಗೆ ಚಂದಾ ಹಣದ ವ್ಯವಹಾರವನ್ನು ಇಟ್ಟುಕೊಳ್ಳಬಹುದು. ಬಾಕಿಯುವರ ಈ ಹಿಂದಿನ ಸಂಗಾತಿಯ ಏಜೆಂಟ್‌ತನವು ಇಂದಿನಿಂದಲೇ ರದ್ದಾಗುವುದು. ಇನ್ನು ಮುಂದಕ್ಕೆ ಚಂದಾದಾರರು ನೇರವಾಗಿ ಸಂಗಾತಿಯನ್ನು ಸಂಪರ್ಕಿಸುವುದು ಇಲ್ಲವೇ ಈ ಕೆಳಗಿನವರುಗಳಲ್ಲಿ ಮಾತ್ರ ವ್ಯವಹಾರವನ್ನು ಇಟ್ಟುಕೊಳ್ಳುವುದು.

| | | | | |
|---|---|---|---|---|
| 1) | ಬೈತಡ್ಕ ಜಾನಕಿ ಬೆಳ್ಯಪ್ಪ | ☎ | ಮಡಿಕೇರಿ | 08272 - 28047 |
| 2) | ಚೆರಿಯಮನೆ ರಮೇಶ್ | ☎ | ಮಡಿಕೇರಿ | 08272 - 29620 |
| 3) | ಬಾರಿಕೇರ ಮನೋಜ್ ಕುಮಾರ್ | ☎ | ವಿರಾಜಪೇಟೆ | 08274 - 56591 |
| 4) | ಕುಂಭಗೌಡನ ಸೋಮಣ್ಣ | ☎ | ಕುಶಾಲನಗರ | 08276 - 73005 (S)/(R)73370 |
| 5) | ಮಾಳಿಗೆ ಮನೆ ಜನಾರ್ದನ | ☎ | ಮರಗೋಡು | 08272 - 31511 |
| 6) | ಕೋಳುಮುಡಿಯನ ಅನಂತ್‌ಕುಮಾರ್ | ☎ | ಗಾಳಿಬೀಡು | 08272 - 65632 |
| 7) | ಮೇಡ್ತಲ ಗೋಪಾಲ | ☎ | ಪೆರಾಜೆ | 08272 - 34652 |
| 8) | ಪಾರೆಮಜಲು ಮೋಹನ್ | ☎ | ಗುಡ್ಡೂರು | 08274 - 58515 |
| 9) | ಪಾರಾತಲೆ ರಾಮಪ್ಪ | ☎ | ಚೇರಂಬಾಣೆ | 08272 - 35214 |
| 10) | ಸೂರ್ತಲೆ ಜಯಂತ | ☎ | ಭಾಗಮಂಡಲ | 08272 - 33214 (O)/(R) 33268 |
| 11) | ಕುಯ್ಯುಮುಡಿ ಸುನೀಲ್ ಕುಮಾರ್ | ☎ | ಸಂಣಪುಲಿಕೋಟು | 08272 - 30633 |
| 12) | ಕಲ್ಲುಮುಟ್ಲು ಬಸಪ್ಪ | ☎ | ಬೆಂಗಳೂರು | 080 - 6500946 |
| 13) | ನಂಗಾರು ನಿಂಗರಾಜ್ | ☎ | ಬೆಂಗಳೂರು | 080 - 3433328 |
| 14) | ಪಟ್ಟೆಮನೆ ಶೇಷಪ್ಪ | ☎ | ಸುಂಠಿಕೊಪ್ಪ | 08276 - 62669 |
| 15) | ಕುಂಟುಪುಣಿ ರಾಮಕೃಷ್ಣ | ☎ | ಮೈಸೂರು | 0821 - xxxx |

**Kodagu Sangathi** Kannada Fortnightly Edited, Published, Printed by **Pattada P. Sheelamani, Doddanna Buildings, Hunsur Road, Hinkal Post, Mysore-570017. ☎ : 0821/404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.